# ಬಸವಣ್ಣ

## ವಚನಗಳ ಓದು

ಸಿ.ಪಿ.ನಾಗರಾಜ

ನಾಗು ಸ್ಮಾರಕ ಪ್ರಕಾಶನ
75, 'ಎ' ಬ್ಲಾಕ್, 5ನೆಯ ಕ್ರಾಸ್, ಕ್ರಿಷ್ಣ ಗಾರ್ಡನ್
ಆರ್.ವಿ. ಕಾಲೇಜು ಪೋಸ್ಟ್, ಬೆಂಗಳೂರು–560059

**BASAVANNA VACHANAGALA ODU :** by C.P.Nagaraja.
Published by Nagu Smaraka Prakashana, 75 , 'A' Block , 5th Cross, Krishna Garden, R.V.College Post, Benagaluru-560059.
Mob: 99863 47521.

First Edition: 2019 Page: x+142 Price: Rs.120
Paper: 80gsm Ns Maplitho Size: Demy 1/8 Copies:1000


ಪುಟಗಳು: 10+142

ಪ್ರತಿಗಳು: 1000

ಬೆಲೆ: ರೂ. 120/-

ಮುಖಪುಟ ವಿನ್ಯಾಸ: ಎಂ.ಎಲ್.ಸೋಮವರದ, ಮಂಡ್ಯ
ಮೊ: 9743512174, 8618580924

ಪ್ರತಿಗಳು ದೊರೆಯುತ್ತವೆ:

**ಮುನ್ನೋಟ ಪುಸ್ತಕ ಮಳಿಗೆ**
# 67, ಸೌತ್ ಅವೆನ್ಯೂ ಕಾಂಪ್ಲೆಕ್ಸ್
ಡಿವಿಜಿ ರಸ್ತೆ, ನಾಗಸಂದ್ರ ಸರ್ಕಲ್ ಬಳಿ
ಬಸವನಗುಡಿ, ಬೆಂಗಳೂರು-560004
ದೂರವಾಣಿ: 080-2660 3000

**ಆರ್.ಸುಧೀಂದ್ರ ಕುಮಾರ್**
# 9, 20 ನೆಯ ಮೈನ್, 3 ನೆಯ ಕ್ರಾಸ್
ವಿಜಯನಗರ 2 ನೆಯ ಹಂತ
ಹಂಪಿ ಸರ್ಕಲ್ ಹತ್ತಿರ, ಮೈಸೂರು-570017.
ಮೊಬೈಲ್: 8892626269

ಸ್ವಾನ್ ಪ್ರಿಂಟರ್ಸ್
svanprint@gmail.com
☎ 080-26742233

# ವಚನಕಾರರ ವಿಚಾರ ಕ್ರಾಂತಿ

ಯಾವ ಯಾವ ಜಡ್ಡುಗಟ್ಟಿದ ಕಾಲಗಳಲ್ಲಿ ಸೂಕ್ಷ್ಮ ಸಂವೇದನೆ ಉಳ್ಳವರೂ, ವಿಚಾರವಂತರೂ ಆದ ಕೆಲವೇ ಜನ ತಮ್ಮ ಸುತ್ತಣ ಪರಿಸ್ಥಿತಿಯನ್ನೂ ಮತ್ತು ಅದನ್ನು ನಿಯಂತ್ರಿಸಿಕೊಂಡು ಬಂದ ರೂಢಿಗತವಾದ ವ್ಯವಸ್ಥೆ ಹಾಗೂ ಸಂಪ್ರದಾಯಗಳನ್ನೂ ಪ್ರಶ್ನಿಸಲು ತೊಡಗುತ್ತಾರೋ, ಪ್ರತಿಭಟಿಸಲು ತೊಡಗುತ್ತಾರೋ ಅಂತಹ ಕಾಲಗಳನ್ನು ಸಂಕ್ರಮಣ ಕಾಲಗಳೆಂದು ಕರೆಯಬಹುದು. ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಇಂತಹ ಒಂದು ಸಂಕ್ರಮಣ ಕಾಲ.

ಹನ್ನೆರಡನೆಯ ಶತಮಾನದ ವಚನಕಾರರು ಅಥವಾ ಶಿವಶರಣಶರಣೆಯರು ಮೂಲತಃ ನಿಷ್ಠುರ ವಿಮರ್ಶಕರು. ಪರಂಪರೆಯನ್ನು ಕುರಿತು, ಧರ್ಮವನ್ನು ಕುರಿತು, ದೇವರನ್ನು ಕುರಿತು, ತಮ್ಮ ಸುತ್ತಣ ಸಾಮಾಜಿಕ ಪರಿಸರವನ್ನು ಕುರಿತು, ಎಲ್ಲಕ್ಕೂ ಮಿಗಿಲಾಗಿ ತಮ್ಮನ್ನೇ ಕುರಿತು ವಸ್ತುನಿಷ್ಠವಾಗಿ ವಿಮರ್ಶೆ ಮಾಡಿದವರು.

ಜಿ.ಎಸ್.ಶಿವರುದ್ರಪ್ಪ
'ವಚನಕಾರರ ವಿಚಾರ ಕ್ರಾಂತಿ'
ಅನುರಣನ(೧೯೭೮)

## ವಚನಗಳ ಓದಿಗೆ ನೆರವಾದ ಪುಸ್ತಕಗಳು

ಎಂ.ಎಂ.ಕಲಬುರ್ಗಿ (ಪ್ರಧಾನ ಸಂಪಾದಕರು)
ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಯ ಮಹಾ ಸಂಪುಟಗಳು
ಬಸವ ಯುಗದ ವಚನ ಮಹಾ ಸಂಪುಟ : ಒಂದು
ಬಸವೋತ್ತರ ಯುಗದ ವಚನ ಮಹಾ ಸಂಪುಟ: ಎರಡು
ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು.
ತೃತೀಯ ಆವೃತ್ತಿ (ಬೈಬಲ್ ಮುದ್ರಣ ಮಾದರಿ) ೨೦೧೬

# ನನ್ನ ನುಡಿ

ಬಸವಣ್ಣನವರ ವಚನಗಳನ್ನು ಓದುತ್ತಿದ್ದಾಗ, ನನಗೆ ಮೆಚ್ಚುಗೆಯಾದ ಕೆಲವು ವಚನಗಳನ್ನು ಓದುಗರ ಗಮನಕ್ಕೆ ತರಬೇಕೆಂಬ ಆಸೆಯಾಯಿತು. ವಚನಗಳನ್ನು ಮೊದಲ ಬಾರಿ ಓದುವವರಿಗೆ ನೆರವಾಗಲೆಂಬ ಉದ್ದೇಶದಿಂದ ವಚನದಲ್ಲಿ ಜತೆಗೂಡಿರುವ ಪದಗಳನ್ನು ಬಿಡಿಸಿ ಬರೆದು, ಪದಗಳ ತಿರುಳನ್ನು ತಿಳಿಸಿ, ವಚನದ ಇಂಗಿತವನ್ನು ನಾಲ್ಕಾರು ಸಾಲುಗಳಲ್ಲಿ ವಿವರಿಸಿ ಗುರುಗಳಾದ ಕೆ.ವಿ.ನಾರಾಯಣ ಅವರಿಗೆ ತೋರಿಸಿದೆನು. ಅದನ್ನು ನೋಡಿದ ಅವರು "ಹೊಸ ತಲೆಮಾರಿನ ಓದುಗರಿಗೆ ಈ ರೀತಿಯ ಬರಹ ಉಪಯೋಗಕ್ಕೆ ಬರಬಹುದು. ಇದನ್ನು ಮುಂದುವರಿಸಿ" ಎಂದು ಸಲಹೆಯನ್ನು ನೀಡಿ, ನನ್ನ ಬರವಣಿಗೆಗೆ ಮಾರ್ಗದರ್ಶನ ನೀಡಿದರು.

ಬರಹವನ್ನು ಆನ್‌ಲೈನ್ ಮ್ಯಾಗಜೀನ್ ಹೊನಲು ಮಿಂದಾಣಕ್ಕೆ (honalu.net) ಕಳುಹಿಸಿದೆನು. ಹೊನಲು ಮಿಂದಾಣದ ಸಂಪಾದಕ ವರ್ಗದವರು ಹದಿನಾಲ್ಕು ಕಂತುಗಳಲ್ಲಿ ಇಪ್ಪತ್ತಾರು ವಚನಗಳನ್ನು ಪ್ರಕಟಿಸಿದರು. ಮೂಡಿ ಬಂದ ಬರಹಕ್ಕೆ ಹೊನಲು ಮಿಂದಾಣದ ಓದುಗ ಬಳಗದವರು ಮೆಚ್ಚುಗೆಯನ್ನು ಸೂಚಿಸಿದರು. ಈ ರೀತಿ ಬರಹ ರೂಪುಗೊಳ್ಳಲು ಗುರುಗಳಾದ ಕೆ.ವಿ.ನಾರಾಯಣ ಅವರ ಮಾರ್ಗದರ್ಶನ, ಹೊನಲು ಮಿಂದಾಣದ ಸಂಪಾದಕ ವರ್ಗ ಮತ್ತು ಓದುಗರು ನೀಡಿದ ಉತ್ತೇಜನವೇ ಕಾರಣವಾಗಿದೆ.

ಬರಹವನ್ನು ಹೊನಲು ಮಿಂದಾಣಕ್ಕೆ ಕಳುಹಿಸುವುದಕ್ಕೆ ಮೊದಲು ಗೆಳೆಯರಾದ ಆರ್.ಲಕ್ಷ್ಮೀನಾರಾಯಣ, ಆರ್.ಚಲಪತಿ, ಬಿ.ಎ.ಅನ್ನದಾನೇಶ್, ಸುಬ್ರಹ್ಮಣ್ಯ ಸ್ವಾಮಿ ಮತ್ತು ಟಿ.ಮಂಜುನಾಥ ಅವರಿಗೆ ಮಿಂಚಂಚೆಯ ಮೂಲಕ ಕಳುಹಿಸುತ್ತಿದ್ದೆನು. ಅವರು ಪ್ರತಿಯೊಂದು ವಚನದ ಟಿಪ್ಪಣಿಯನ್ನು ಪರಿಶೀಲಿಸಿ, ಅದರ ಸರಿ/ತಪ್ಪುಗಳನ್ನು ಗಮನಿಸಿ, ತಪ್ಪುಗಳನ್ನು ತಿದ್ದಿ ಸರಿಪಡಿಸಿಕೊಳ್ಳಲು ಸೂಚನೆಗಳನ್ನು ನೀಡುತ್ತಿದ್ದರು. ಈ ಬರಹದ ಕರಡು ಪ್ರತಿಯನ್ನು ನನ್ನ ಗುರುಹಿರಿಯರು ಮತ್ತು ಗೆಳೆಯರಿಗೆ ಅಂಚೆ ಮೂಲಕ ಕಳುಹಿಸಿದ್ದೆನು. ಅವರೆಲ್ಲರೂ ಓದಿ ನೋಡಿ ಉತ್ತೇಜನದ ನುಡಿಗಳನ್ನಾಡಿದ್ದಾರೆ. ರಾಷ್ಟ್ರಕವಿ

ಜಿ.ಎಸ್.ಶಿವರುದ್ರಪ್ಪನವರು 'ವಚನಕಾರರ ವಿಚಾರ ಕ್ರಾಂತಿ' ಎಂಬ ಬರಹದಲ್ಲಿ ಹೇಳಿದ್ದ ಕೆಲವು ನುಡಿಗಳನ್ನು ಮುನ್ನುಡಿಯ ರೂಪದಲ್ಲಿ ಬಳಸಿಕೊಂಡಿದ್ದೇನೆ.

ಎಂ.ಎಂ.ಕಲಬುರ್ಗಿ ಅವರು ಸಂಪಾದಿಸಿರುವ 'ಬಸವಣ್ಣನವರ ವಚನ ಸಂಪುಟ' ದಿಂದ ವಚನಗಳನ್ನು ಮತ್ತು ವಚನದ ಸಾಲುಗಳನ್ನು ಆಯ್ದುಕೊಂಡಿದ್ದೇನೆ. (ಬಸವಯುಗದ ವಚನ ಮಹಾಸಂಪುಟ: ಒಂದು)

ಕನ್ನಡ ಬರಹದಲ್ಲಿ ಬಳಸಬೇಕಾದ ಲಿಪಿಗಳ ಬಗ್ಗೆ ಡಿ.ಎನ್.ಶಂಕರ ಬಟ್ ಅವರ ವಿಚಾರಗಳು ನನಗೆ ಒಪ್ಪಿಗೆಯಾಗಿರುವುದರಿಂದ ವಚನಗಳಿಗೆ ಟಿಪ್ಪಣಿಯನ್ನು ಬರೆಯುವಾಗ ಕನ್ನಡದ ಮೂವತ್ತೊಂದು ಲಿಪಿಗಳನ್ನು ಮಾತ್ರ ಬಳಸಿದ್ದೇನೆ.

ಬಸವಣ್ಣನವರ ವಚನಗಳ ಓದಿಗೆ ನೆರವಾದ ಮೇಲ್ಕಂಡ ಎಲ್ಲಾ ಗುರು ಹಿರಿಯರಿಗೆ ಮತ್ತು ಗೆಳೆಯರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಸಿ.ಪಿ.ನಾಗರಾಜ
ಬೆಂಗಳೂರು

## ವಚನಗಳು

ವಚನದಿಂದ ಆಯ್ದ ಸಾಲುಗಳು

# ಬಸವಣ್ಣ

| | |
|---|---|
| ಕಾಲ: | ಕ್ರಿ.ಶ.೧೧೩೧ |
| ಹುಟ್ಟಿದ ಊರು: | ಬಾಗೇವಾಡಿ, ಬಿಜಾಪುರ ಜಿಲ್ಲೆ. |
| ತಂದೆ: | ಮಾದರಸ |
| ತಾಯಿ: | ಮಾದಲಾಂಬಿಕೆ |
| ಹೆಂಡತಿಯರು: | ಗಂಗಾಂಬಿಕೆ, ನೀಲಾಂಬಿಕೆ |
| ಗುರು: | ಜಾತವೇದ ಮುನಿ |
| ವಿದ್ಯೆಯನ್ನು ಪಡೆದ ನೆಲೆ: | ಕೂಡಲ ಸಂಗಮ, ಹುನಗುಂದ ತಾಲ್ಲೂಕು. ಬಿಜಾಪುರ ಜಿಲ್ಲೆ. |
| ಕಸುಬು: | ೧) ಕರಣಿಕ (ಲೆಕ್ಕ ಬರೆಯುವವನು)<br>೨) ರಾಜ್ಯ ಬೊಕ್ಕಸದ/ಹಣಕಾಸಿನ ಆಡಳಿತಗಾರ.<br>[ಸೊಲ್ಲಾಪುರ ಜಿಲ್ಲೆಯ ಮಂಗಳವಾಡದಲ್ಲಿ ಮಾಂಡಲಿಕನಾಗಿದ್ದ ಬಿಜ್ಜಳನ ಬಳಿಯಲ್ಲಿ ಬಸವಣ್ಣ ಮೊದಲು ಕರಣಿಕನಾಗಿ ಕೆಲಸ ಮಾಡಿದರು. ಅನಂತರ ರಾಜನಾದ ಬಿಜ್ಜಳನು ಬೀದರ್ ಜಿಲ್ಲೆಯ ಕಲ್ಯಾಣವನ್ನು (ಬಸವ ಕಲ್ಯಾಣ) ತನ್ನ 'ರಾಜಧಾನಿ'ಯನ್ನಾಗಿ ಮಾಡಿಕೊಂಡಾಗ, ಅಲ್ಲಿ ಬಿಜ್ಜಳನ ಬೊಕ್ಕಸದ ಆಡಳಿತಗಾರನಾಗಿ ಕೆಲಸ ಮಾಡಿದರು. ಸೊಲ್ಲಾಪುರವು ಈಗ 'ಮಹಾರಾಷ್ಟ್ರ' ರಾಜ್ಯಕ್ಕೆ ಸೇರಿದೆ.] |
| ದೊರೆತಿರುವ ವಚನಗಳು: | ೧೪೦೬ |
| ವಚನಗಳ ಅಂಕಿತನಾಮ: | ಕೂಡಲಸಂಗಮದೇವ |

೧) ಇನ್ನೇವೆನಿನ್ನೇವೆನಯ್ಯಾ
ಎನ್ನ ಮನವೆಂಬ ಮರ್ಕಟನ ದಾಳಿ
ಘನವಾಯಿತ್ತು

ಎನ್ನ ನಿಂದಲ್ಲಿ ನಿಲಲೀಯದು
ಎನ್ನ ಕುಳಿತಲ್ಲಿ ಕುಳ್ಳಿರಲೀಯದು

ಕ್ಷಣದಲ್ಲಿ ಪಾತಾಳಕ್ಕೆ ಐದುತ್ತಿದೆ
ಕ್ಷಣದಲ್ಲಿ ಆಕಾಶಕ್ಕೆ ಐದುತ್ತಿದೆ
ಕ್ಷಣದಲ್ಲಿ ದಿಗ್ದೆಸೆಗೆ ಐದುತ್ತಿದೆ

ಕೂಡಲಸಂಗಮದೇವಾ
ಈ ಮನವೆಂಬ ಮರ್ಕಟನ
ದಾಳಿಯನೆಂದಿಗೆ ನೀಗಿ
ಎಂದು ನಿಮ್ಮನೊಡಗೂಡುವೆನಯ್ಯಾ.

**ನೂರೆಂಟು ಬಗೆಯ ಒಳಮಿಡಿತಗಳಿಂದ ಅತ್ತ ಇತ್ತ ಎತ್ತೆತ್ತಲೋ ತುಡಿಯುತ್ತಿರುವ ಮನಸ್ಸನ್ನು ವ್ಯಕ್ತಿಯು ತನ್ನ ಹತೋಟಿಗೆ ತಂದುಕೊಂಡು, ಅದನ್ನು ಒಳಿತಿನ ನಡೆನುಡಿಗಳಲ್ಲಿ ನೆಲೆಗೊಳಿಸಬೇಕೆಂಬ ಹಂಬಲದಿಂದ ಪರಿತಪಿಸುತ್ತಿರುವುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಇನ್ನು+ಏವೆನ್+ಇನ್ನು+ಏವೆನ್+ಅಯ್ಯಾ; ಇನ್ನು=ಮತ್ತೆ/ಬೇರೆ; ಏವೆನ್=ಏನು ಮಾಡಲಿ/ಏನು ತಾನೆ ಮಾಡುವೆನು; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ಎನ್ನ=ನನ್ನ; ಮನ+ಎಂಬ; ಮನ=ಮನಸ್ಸು; ಎಂಬ=ಎನ್ನುವ; ಮರ್ಕಟ=ಕೋತಿ/ಮಂಗ/ಕಪಿ; ದಾಳಿ=ಲಗ್ಗೆ/ಮುತ್ತಿಗೆ/ಆಕ್ರಮಣ/ಮಯ್ ಮೇಲೆ ಏರಿಬರುವುದು; ಘನ+ಆಯಿತ್ತು; ಘನ=ದೊಡ್ಡದು/ಹೆಚ್ಚಿನ ಕಸುವುಳ್ಳದ್ದು/ ದಟ್ಟವಾದುದು; ಆಯಿತ್ತು=ಆಗಿರುವುದು;

ಇನ್ನೇವೆನಿನ್ನೇವೆನಯ್ಯಾ=ಇನ್ನು ಮುಂದೆ ನಾನು ಏನು ತಾನೆ ಮಾಡಲಿ/ಏನನ್ನು ಮಾಡಲಾಗದ ನೆಲೆಯಲ್ಲಿ ನಾನು ಸಿಲುಕಿ ಒದ್ದಾಡುತ್ತಿದ್ದೇನೆ;

ಎನ್ನ ಮನವೆಂಬ ಮರ್ಕಟನ ದಾಳಿ ಘನವಾಯಿತ್ತು=ನನ್ನ ಮನಸ್ಸಿನಲ್ಲಿ ನೂರಾರು ಬಗೆಯ ಒಳಮಿಡಿತಗಳ ತಾಕಲಾಟ ಹೆಚ್ಚಾಗಿದೆ. ಒಲವು/ನಲಿವು/ಕೋಪ/ತಾಪ/ಹೆದರಿಕೆ/ನಿರಾಶೆ/ಹಿಂಜರಿಕೆ/ಸೇಡು/ಅಸೂಯೆ ಮುಂತಾದ ಬಗೆಬಗೆಯ ಒಳಮಿಡಿತಗಳು ಪ್ರತಿಯೊಬ್ಬ ವ್ಯಕ್ತಿಯ ಮನದಲ್ಲಿ ನಿರಂತರವಾಗಿ ಮೂಡುತ್ತಿರುತ್ತವೆ. ಇವುಗಳನ್ನು ಹತೋಟಿಯಲ್ಲಿಟ್ಟುಕೊಂಡು ಬಾಳುವುದು ವ್ಯಕ್ತಿಯ ಪಾಲಿಗೆ ಬಹು ದೊಡ್ಡ ಸವಾಲಿನ ಕೆಲಸವಾಗಿರುತ್ತದೆ. ಒಂದು ಗಳಿಗೆಯಾದರೂ ಇದ್ದ ಕಡೆಯಲ್ಲಿ ಇರಲಾರದೆ ಅತ್ತಿತ್ತ ನೆಗೆದಾಡುತ್ತ, ಯಾವುದಾದರೊಂದು ಬಗೆಯ ಕ್ರಿಯೆಯಲ್ಲಿ ತೊಡಗಿರುವ ಕೋತಿಯ ವರ್ತನೆಯನ್ನು ವ್ಯಕ್ತಿಯ ಮನಸ್ಸಿನ ಚಂಚಲತೆಯನ್ನು ಸೂಚಿಸುವುದಕ್ಕೆ ಒಂದು ರೂಪಕವಾಗಿ ಚಿತ್ರಿಸಲಾಗಿದೆ;

ನಿಂದ+ಅಲ್ಲಿ; ನಿಂದ=ನಿಂತುಕೊಂಡ; ನಿಂದಲ್ಲಿ=ನಿಂತುಕೊಂಡಿರುವ ಎಡೆಯಲ್ಲಿ/ನೆಲೆಯಲ್ಲಿ/ಜಾಗದಲ್ಲಿ; ನಿಲ್+ಅಲ್+ಈಯದು; ನಿಲ್=ನಿಂತುಕೊಳ್ಳುವುದು; ನಿಲ್ಲಲ್=ನಿಂತುಕೊಳ್ಳಲು; ಈ=ಕೊಡು/ಅವಕಾಶವನ್ನು ನೀಡುವುದು; ಈಯದು=ಕೊಡುತ್ತಿಲ್ಲ/ಬಿಡುತ್ತಿಲ್ಲ; ಕುಳಿತ+ಅಲ್ಲಿ; ಕುಳ್=ಕುಳಿತುಕೊಳ್ಳುವುದು; ಕುಳಿತ=ಕುಂತಿರುವ; ಅಲ್ಲಿ=ಎಡೆಯಲ್ಲಿ/ಜಾಗದಲ್ಲಿ/ನೆಲೆಯಲ್ಲಿ; ಕುಳ್ಳಿರಲ್+ಈಯದು; ಕುಳ್ಳಿರಲ್=ಕುಳಿತುಕೊಂಡಿರಲು;

ಎನ್ನ ನಿಂದಲ್ಲಿ ನಿಲ್ಲಲೀಯದು ಎನ್ನ ಕುಳಿತಲ್ಲಿ ಕುಳ್ಳಿರಲೀಯದು=ಯಾವುದೇ ಒಳ್ಳೆಯ ಕೆಲಸದಲ್ಲಿ ತೊಡಗಲು ಬಿಡುತ್ತಿಲ್ಲ/ಮನದಲ್ಲಿ ಸದಾಕಾಲ ಒಂದಲ್ಲ ಒಂದು ಬಗೆಯ ಒತ್ತಡ/ಕಳವಳ/ಸಂಕಟ/ಹಿಂಜರಿಕೆಯ ಒಳಮಿಡಿತಗಳೇ ತುಂಬಿಕೊಂಡು ಒಳ್ಳೆಯ ಕೆಲಸವನ್ನು ಮಾಡಲು ಆಗುತ್ತಿಲ್ಲ;

ಕ್ಷಣ+ಅಲ್ಲಿ; ಕ್ಷಣ=ಗಳಿಗೆ/ಕಾಲದ ಚಿಕ್ಕ ಪ್ರಮಾಣ; ಕ್ಷಣದಲ್ಲಿ=ಗಳಿಗೆಯಲ್ಲಿ; ಪಾತಾಳ=ದೇವಲೋಕ / 'ಭೂಲೋಕ' / ಪಾತಾಳ ಲೋಕ ಎಂಬ ಮೂರು ಲೋಕಗಳು ಇರುವುದಾಗಿಯೂ, 'ಭೂಲೋಕ'ದ ಮೇಲುಗಡೆಯಲ್ಲಿ ದೇವಲೋಕವು ಮತ್ತು 'ಭೂಲೋಕ'ದ ಕೆಳಗಡೆಯಲ್ಲಿ ಪಾತಾಳ ಲೋಕವಿದೆಯೆಂಬ ಕಲ್ಪನೆಯು ಜನಮನದಲ್ಲಿದೆ; ಐದುತ್ತ+ಇದೆ;

ಎಯ್ದು>ಐದು=ಬರು/ಸಮೀಪಿಸು; ಐದುತ್ತ=ಬರುತ್ತ/ಸಮೀಪಿಸುತ್ತ/ಬಳಿಸಾರುತ್ತ; ಇದೆ=ಇರುವುದು; ಆಕಾಶ=ಗಗನ/ಬಾನು/ಮುಗಿಲು; ದಿಕ್+ದೆಸೆ; ದಿಕ್ಕು=ದೇಶ/ಸೀಮೆ/ನೆಲೆ; ದೆಸೆ=ದಿಕ್ಕು ; ದಿಗ್ದೆಸೆಗೆ=ಎಲ್ಲಾ ಕಡೆಗೆ/ದಿಕ್ಕುದಿಕ್ಕುಗಳಲ್ಲಿಯೂ;

ಕ್ಷಣದಲ್ಲಿ ಪಾತಾಳಕ್ಕೆ ಐದುತ್ತಿದೆ ಕ್ಷಣದಲ್ಲಿ ಆಕಾಶಕ್ಕೆ ಐದುತ್ತಿದೆ ಕ್ಷಣದಲ್ಲಿ ದಿಗ್ದೆಸೆಗೆ ಐದುತ್ತಿದೆ=ಮನಸ್ಸಿನ ಒಳಮಿಡಿತಗಳಾದ ಒಲವು/ನೋವು/ನಲಿವು/ಕಾಮ/ಕೋಪ/ತಾಪ/ಅಂಜಿಕೆ/ಹಿಂಜರಿಕೆಗಳೆಲ್ಲವೂ ಹೇಗೆ ವೇಗವಾಗಿ ಒಂದು ಸಂಗತಿಯಿಂದ ಮತ್ತೊಂದು ಸಂಗತಿಯತ್ತ ಸಾಗುತ್ತಿರುತ್ತವೆ ಎಂಬುದನ್ನು ಪಾತಾಳ/ಆಕಾಶ/ದಿಕ್ಕುಗಳ ವಿಸ್ತಾರವಾದ ನೆಲೆಯಲ್ಲಿ ಹಾರಾಡುವ ರೂಪಕದ ಮೂಲಕ ವಿವರಿಸಲಾಗಿದೆ. ವ್ಯಕ್ತಿಯ ಮನದೊಳಗೆ ಮೂಡುವ ಒಳಮಿಡಿತಗಳಿಗೆ ಯಾವುದೇ ಅಡೆತಡೆ/ಮಿತಿ/ಕೊನೆ ಎಂಬುದು ಇರುವುದಿಲ್ಲ. ಎಲ್ಲಿಂದ ಎಲ್ಲಿಗೆ ಬೇಕಾದರೂ ಅರೆಗಳಿಗೆಯಲ್ಲಿ ಹೋಗಿ ಬರುವ ಮನಸ್ಸಿನ ಒಳಮಿಡಿತಗಳ ವೇಗವನ್ನು ಈ ನುಡಿಗಳು ಸೂಚಿಸುತ್ತಿವೆ;

ಕೂಡಲಸಂಗಮದೇವ=ಶಿವ/ಈಶ್ವರ/ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತನಾಮ;

ಕೂಡಲು=ಎರಡು ನದಿಗಳು ಜತೆಗೂಡುವ ಜಾಗ; ಸಂಗಮ=ಎರಡು ನದಿಗಳು ಜತೆಗೂಡುವ ಜಾಗ/ಲಿಂಗ/ಶಿವ; ಕೂಡಲ ಸಂಗಮ=ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನಲ್ಲಿರುವ ಒಂದು ಊರು. 'ಕೃಷ್ಣ' ಮತ್ತು'ಮಲಪ್ರಭಾ' ಎಂಬ ಹೆಸರಿನ ಎರಡು ನದಿಗಳು ಇಲ್ಲಿ ಜತೆಗೂಡುತ್ತವೆ. ನದಿಗಳು ಕೂಡುವ ಜಾಗದ ದಂಡೆಯಲ್ಲಿ ಸಂಗಮೇಶ್ವರ ದೇವಾಲಯವಿದೆ. ಆದ್ದರಿಂದ ಈ ಊರಿಗೆ ಕೂಡಲ ಸಂಗಮ ಎಂಬ ಹೆಸರು ಬಂದಿದೆ.

ದಾಳಿ+ಅನ್+ಎಂದಿಗೆ; ದಾಳಿಯನ್=ಆಕ್ರಮಣವನ್ನು/ಮುತ್ತಿಗೆಯನ್ನು; ಎಂದಿಗೆ=ಯಾವಾಗ/ಯಾವ ಕಾಲಕ್ಕೆ; ನೀಗಿ=ಪರಿಹರಿಸಿ/ನಿವಾರಿಸಿ; ಎಂದು=ಯಾವ ದಿನ/ಯಾವ ಸಮಯ/ಯಾವ ಕಾಲ; ನಿಮ್ಮನ್+ಒಡಗೂಡುವೆನ್+ಅಯ್ಯಾ; ನಿಮ್ಮನ್ನು=ಕೂಡಲಸಂಗಮನನ್ನು; ಒಡಗೂಡು=ಜತೆಸೇರು/ಒಂದಾಗು/ಬೆರೆಯುವುದು; ಒಡಗೂಡುವೆನ್=ಜತೆಸೇರುವೆನು;

ಈ ಮನವೆಂಬ ಮರ್ಕಟನ ದಾಳಿಯನೆಂದಿಗೆ ನೀಗಿ ಎಂದು ನಿಮ್ಮನೊಡಗೂಡುವೆನಯ್ಯಾ=ಅತ್ತಿತ್ತ ತುಯ್ದಾಡುವ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು, ಮನದಲ್ಲಿ ಮೂಡುವ ಕೆಟ್ಟ ಒಳಮಿಡಿತಗಳನ್ನು ಹೋಗಲಾಡಿಸಿಕೊಂಡು, ಒಳ್ಳೆಯ ನಡೆನುಡಿಗಳ ಮೂಲಕ ಬಾಳಲು ವ್ಯಕ್ತಿಯ ಮನಸ್ಸು ಹಂಬಲಿಸುತ್ತಿದೆ. ಜೀವನದಲ್ಲಿ ಒಳ್ಳೆಯತನದಿಂದ ಬಾಳುವುದರ ಮೂಲಕ ದೇವರನ್ನು ಕಾಣಲು/ಕೂಡಲು ಬಯಸುತ್ತಿರುವ ವ್ಯಕ್ತಿಯ ನಿಲುವನ್ನು ಈ ನುಡಿಗಳು ಸೂಚಿಸುತ್ತಿವೆ.)



೨)      ಉಳ್ಳವರು ಶಿವಾಲಯ ಮಾಡಿಹರು
ನಾನೇನ ಮಾಡುವೆ ಬಡವನಯ್ಯಾ

ಎನ್ನ ಕಾಲೇ ಕಂಬ
ದೇಹವೇ ದೇಗುಲ
ಶಿರ ಹೊನ್ನಕಲಶವಯ್ಯಾ

ಕೂಡಲಸಂಗಮದೇವಾ
ಕೇಳಯ್ಯಾ
ಸ್ಥಾವರಕ್ಕಳಿವುಂಟು
ಜಂಗಮಕ್ಕಳಿವಿಲ್ಲ.

ಜಡರೂಪಿಯಾದ ಶಿವನಿಗಾಗಿ ಉಳ್ಳವರು ದೇವಾಲಯವನ್ನು ಕಟ್ಟಿಸಿದ್ದರೆ, ಚೇತನರೂಪಿಯಾದ ಶಿವನಿಗಾಗಿ ವ್ಯಕ್ತಿಯು ತನ್ನ ಮಯ್ ಮನವನ್ನೇ ದೇವಾಲಯವನ್ನಾಗಿ ಮಾಡಿಕೊಂಡಿರುವ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.

'ಜಡರೂಪಿಯಾದ ಶಿವ' ಎಂದರೆ ಕಲ್ಲು/ಮಣ್ಣು/ಲೋಹ/ಮರದಿಂದ ಮಾಡಿರುವ ಶಿವನ ವಿಗ್ರಹ.

'ಚೇತನರೂಪಿಯಾದ ಶಿವ' ಎಂದರೆ ವ್ಯಕ್ತಿಯ ಅರಿವು ಮತ್ತು ಎಚ್ಚರದ ನಡೆನುಡಿಗಳ ಸಂಕೇತವಾಗಿರುವ ಶಿವ.

(ಉಳ್=ಇರು/ಹೊಂದು/ಪಡೆ; ಉಳ್ಳವರು=ಆಸ್ತಿಪಾಸ್ತಿಯನ್ನು ಹೊಂದಿರುವವರು/ಹಣಕಾಸು ಒಡವೆ ವಸ್ತುಗಳನ್ನು ಇಟ್ಟಿರುವವರು/ಸಿರಿವಂತರು/ದೊಡ್ಡ ದೊಡ್ಡ ಗದ್ದುಗೆಯನ್ನೇರಿ ಹೆಚ್ಚಿನ ಸಂಪತ್ತನ್ನು ಪಡೆದವರು; ಶಿವ+ಆಲಯ; ಶಿವ=ಈಶ್ವರ/ದೇವರು; ಆಲಯ=ಮಂದಿರ/ಮನೆ/ನಿವಾಸ; ಶಿವಾಲಯ=ಲಿಂಗದ ಆಕಾರವುಳ್ಳ ಶಿವನ

ವಿಗ್ರಹವನ್ನು ಇಟ್ಟು ಕಟ್ಟಿಸಿರುವ ದೇವಮಂದಿರ/ಶಿವ ದೇವಾಲಯ; ಮಾಡು+ಇಹರು; ಮಾಡು=ಎಸಗು/ನಿರ್ಮಿಸು/ಕಟ್ಟಿಸು; ಇಹರು=ಇರುವರು; ಮಾಡಿಹರು=ಮಾಡಿರುವರು/ ಮಾಡಿದ್ದಾರೆ;

ಉಳ್ಳವರು ಶಿವಾಲಯ ಮಾಡಿಹರು=ದೊಡ್ಡ ಗದ್ದುಗೆಯನ್ನು ಏರಿದವರು ಹಾಗೂ ಹೆಚ್ಚಿನ ಪ್ರಮಾಣದಲ್ಲಿ ಸಂಪತ್ತನ್ನು ಗಳಿಸಿರುವ/ಹೊಂದಿರುವ ಸಿರಿವಂತರು ಶಿವನ ವಿಗ್ರಹವನ್ನು ನೆಲೆಗೊಳಿಸಿ ದೇಗುಲವನ್ನು ಕಟ್ಟಿಸಿದ್ದಾರೆ;

ನಾನ್+ಏನ್+ಅ; ಏನ್=ಯಾವುದು; ಏನ=ಯಾವುದನ್ನು ತಾನೆ; ಮಾಡುವೆ=ಮಾಡಲಿ; ಬಡವನ್+ಅಯ್ಯಾ; ಬಡವ=ಆಸ್ತಿಪಾಸ್ತಿ ಹಣಕಾಸು ಒಡವೆ ವಸ್ತುಗಳಿಲ್ಲದವನು/ಗತಿಯಿಲ್ಲದವನು/ಉಣ್ಣಲು ಉಡಲು ವಾಸಿಸಲು ಬೇಕಾದ ಅನುಕೂಲಗಳು ಇಲ್ಲದವನು;

ನಾನೇನ ಮಾಡುವೆ ಬಡವನಯ್ಯಾ=ಬಡವನಾದ ನಾನು ಸಿರಿವಂತರು ಕಟ್ಟಿಸಿರುವಂತೆ ಶಿವನಿಗಾಗಿ ದೇಗುಲವನ್ನು ಕಟ್ಟಿಸಲಾರೆನು;

ಎನ್ನ=ನನ್ನ; ಕಾಲ್+ಎ; ಕಾಲು=ನಡೆದಾಡಲು ಬಳಸುವ ದೇಹದ ಅಂಗ; ಕಾಲೇ=ಕಾಲುಗಳೇ ; ಕಂಬ=ದೇಗುಲದ ಮಾಳಿಗೆಗೆ ಆಸರೆಯಾಗಿ ನಿಲ್ಲಿಸಿರುವ ಕಲ್ಲಿನ ದಪ್ಪನೆಯ ಮತ್ತು ಉದ್ದನೆಯ ಉಪಕರಣ; ದೇಹ=ಮಯ್/ಶರೀರ ; ದೇಗುಲ= ದೇವ+ಕುಲ; ದೇವ=ದೇವರು; ಕುಲ=ಮನೆ/ಮಂದಿರ; ದೇಗುಲ=ದೇವಾಲಯ/ ದೇವಮಂದಿರ; ಶಿರ=ತಲೆ/ರುಂಡ; ಹೊನ್ನಕಲಶ+ಅಯ್ಯಾ; ಹೊನ್ನು=ಚಿನ್ನ/ಬಂಗಾರ/ ಸ್ವರ್ಣ; ಕಲಶ=ದೇವಾಲಯದ ಗೋಪುರಕ್ಕೆ ಹಾಕಿರುವ ಕಂಚು/ಹಿತ್ತಾಳೆ/ತಾಮ್ರ/ಚಿನ್ನದ ತಗಡಿನಿಂದ ಮಾಡಿರುವ ಹೊದಿಕೆ; ಹೊನ್ನಕಲಶ=ಚಿನ್ನದ ಕಲಶ;

ಎನ್ನ ಕಾಲೇ ಕಂಬ ದೇಹವೇ ದೇಗುಲ ಶಿರ ಹೊನ್ನಕಲಶವಯ್ಯಾ=ನನ್ನ ಕಾಲುಗಳೇ ದೇಗುಲದ ಕಂಬಗಳಾಗಿವೆ. ನನ್ನ ದೇಹವೇ ದೇಗುಲವಾಗಿದೆ. ನನ್ನ ತಲೆಯೇ ದೇವಾಲಯದ ಗೋಪುರದ ತುತ್ತತುದಿಯಲ್ಲಿ ಹೊಳೆಹೊಳೆಯುತ್ತಿರುವ ಚಿನ್ನದ ಕಲಶವಾಗಿದೆ. ನನ್ನ ಮನದ ಒಳಗುಡಿಯಲ್ಲಿ ಅರಿವಿನ ಮತ್ತು ಎಚ್ಚರದ ನಡೆನುಡಿಯ ದಾರಿದೀಪವಾಗಿ ಚೇತನರೂಪಿಯಾದ ಶಿವನು ನೆಲೆಸಿದ್ದಾನೆ;

ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು; ಕೇಳ್+ಅಯ್ಯಾ; ಕೇಳ್=ಆಲಿಸು/ಕಿವಿಗೊಡು/ಗಮನಿಸು; ಕೇಳಯ್ಯಾ=ಕೇಳುವಂತಹವನಾಗು/ಮನಸ್ಸಿಟ್ಟು ಕೇಳಿಸಿಕೊ; ಸ್ಥಾವರಕ್ಕೆ+ಅಳಿವು+ಉಂಟು; ಸ್ಥಾವರ=ಜಡವಾದುದು/ಚಲನೆಯಿಲ್ಲದ್ದು/

ದೇಗುಲದೊಳಗೆ ಮಣ್ಣು/ಮರ/ಕಲ್ಲು/ಲೋಹದಿಂದ ಮಾಡಿ ಇಟ್ಟಿರುವ ಲಿಂಗದ ವಿಗ್ರಹ; ಅಳಿ=ನಾಶವಾಗುವುದು/ಕೆಡುವುದು/ಹಾಳಾಗುವುದು/ಇಲ್ಲವಾಗುವುದು; ಅಳಿವು=ನಾಶ/ಹಾನಿ/ಕೆಡುಕು; ಉಂಟು=ಇದೆ/ಇರುವುದು; ಅಳಿವುಂಟು=ಹಾಳಾಗುವುದು/ನಾಶವಾಗುವುದು/ಇಲ್ಲವಾಗುವುದು; ಜಂಗಮಕ್ಕೆ+ಅಳಿವು+ಇಲ್ಲ;

ಜಂಗಮ=ಚೇತನವುಳ್ಳದ್ದು/ಚಲನೆಯುಳ್ಳದ್ದು/ಯಾವ ಊರಿನಲ್ಲಿಯೂ ಹೆಚ್ಚು ಕಾಲ ನೆಲೆನಿಲ್ಲದೆ, ಸದಾಕಾಲ ಸಂಚರಿಸುತ್ತ, ಒಳ್ಳೆಯ ನಡೆನುಡಿಗಳಿಂದ ಬಾಳುವಂತೆ ಜನರಿಗೆ ತಿಳಿಯಹೇಳುವ ವ್ಯಕ್ತಿ/ಶಿವನಲ್ಲಿ ಒಲವುಳ್ಳ ವ್ಯಕ್ತಿ/ಜನಮನದಲ್ಲಿ ಅರಿವು ಮತ್ತು ಎಚ್ಚರವನ್ನು ಮೂಡಿಸುವ ವ್ಯಕ್ತಿ; ಅಳಿವಿಲ್ಲ=ನಾಶವಿಲ್ಲ/ಹಾನಿಯಿಲ್ಲ;

ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ=ಕಾಲ ಉರುಳಿದಂತೆಲ್ಲಾ ಸಾವಿರಾರು ವರುಶಗಳ ಕಾಲಮಾನದಲ್ಲಿ ಜಡರೂಪದ ಶಿವನ ವಿಗ್ರಹವನ್ನುಳ್ಳ ಶಿವಾಲಯ ಪಾಳುಬಿದ್ದು ಇಲ್ಲವಾಗುತ್ತದೆ. ಆದರೆ ಅರಿವು ಮತ್ತು ಎಚ್ಚರದ ನಡೆನುಡಿಗಳನ್ನು ಜನಮನದಲ್ಲಿ ಮೂಡಿಸುವ ಜಂಗಮನ ಕೆಲಸವು ತಲೆಮಾರಿನಿಂದ ತಲೆಮಾರಿಗೆ ಆಯಾಯ ಕಾಲದಲ್ಲಿ ಬದುಕಿ ಬಾಳುತ್ತಿರುವ ಒಳ್ಳೆಯ ವ್ಯಕ್ತಿಗಳಿಂದ ಮುಂದುವರಿಯುತ್ತಿರುತ್ತದೆ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ.

ಶಿವನನ್ನು ದೇವರನ್ನಾಗಿ ಒಪ್ಪಿಕೊಂಡಿರುವ ಶಿವಶರಣಶರಣೆಯರು ದೇಗುಲವನ್ನು ನಿರಾಕರಿಸುವುದಕ್ಕೆ ಅನೇಕ ಕಾರಣಗಳಿವೆ.

೧) ವಿಗ್ರಹ ರೂಪದಲ್ಲಿ ಕಡೆದಿರುವ ದೇವರನ್ನು ದೇಗುಲದ ಒಳಗುಡಿಯಲ್ಲಿ ನೆಲೆಗೊಳಿಸುತ್ತಿದ್ದಂತೆಯೇ, ವಿಗ್ರಹದ ಹತ್ತಿರಕ್ಕೆ ಹೋಗಿ ಪೂಜಿಸಲು ಪೂಜಾರಿಯು ಮಾತ್ರ ತಕ್ಕವನಾಗುತ್ತಾನೆ. ಇನ್ನುಳಿದವರು ಒಳಗುಡಿಯಿಂದ ಹೊರನಿಲ್ಲಬೇಕಾಗುತ್ತದೆ. ಇಲ್ಲಿಂದಲೇ ಮಾನವರಲ್ಲಿ ಮೇಲು-ಕೀಳಿನ ವಿಂಗಡಣೆಯು ಮೊದಲಾಗುತ್ತದೆ. ಮೇಲು/ಕೀಳಿನ ಜಾತಿ ಮೆಟ್ಟಲುಗಳಿಂದ ಕೂಡಿರುವ ನಮ್ಮ ಸಮಾಜದ ಜಾತಿರಚನೆಯ ಕಟ್ಟುಪಾಡುಗಳನ್ನು ದೇಗುಲದಲ್ಲಿ ನಡೆಯುವ ಆಚರಣೆಗಳು ಮುಂದುವರಿಸಿಕೊಂಡು ಬರುತ್ತಿವೆ.

ಮೇಲು ಜಾತಿಯವರಿಗೆ ಮತ್ತು ಮೇಲು ವರ್ಗದವರಿಗೆ ಅಂದರೆ ಸಿರಿವಂತರಿಗೆ ಹಾಗೂ ದೊಡ್ಡ ದೊಡ್ಡ ಗದ್ದುಗೆಯಲ್ಲಿರುವವರಿಗೆ ಮೊದಲ ಮನ್ನಣೆಯನ್ನು ನೀಡುವ ದೇಗುಲದ ಆಚರಣೆಗಳು, ಕೆಳ ಜಾತಿ ಮತ್ತು ಕೆಳ ವರ್ಗದ ಅಂದರೆ ಹಣವಿಲ್ಲದ/ಸಂಪತ್ತಿಲ್ಲದ/ಗದ್ದುಗೆಯಿಲ್ಲದ ಜನಸಮುದಾಯವನ್ನು ಕಡೆಗಣಿಸಿವೆ. ಈ ರೀತಿ ಮೇಲು/ಕೀಳಿನ ತರತಮವು ಮುಂದುವರಿದುಕೊಂಡು ಹೋಗಲು ಕಾರಣವಾಗಿರುವ ಮತ್ತು ನೆರವಾಗಿರುವ ದೇಗುಲದ ನೆಲೆಯಿಂದ ಶಿವಶರಣಶರಣೆಯರು ದೂರಸರಿದಿದ್ದಾರೆ.

೨) ಉಳ್ಳವರು ದೇಗುಲವನ್ನು ಕಟ್ಟಿಸಲು ಕಾರಣವೇನೆಂಬುದನ್ನು ತಿಳಿಯಬೇಕಾದರೆ, ಮಾನವನ ಮನದಲ್ಲಿ ದೇವರು ರೂಪುಗೊಂಡ ಚರಿತ್ರೆಯನ್ನು ಮೊದಲು ಅರಿಯಬೇಕು. ಪ್ರಾಚೀನ ಕಾಲದಲ್ಲಿ ಮಾನವನು ತನ್ನ ಕಣ್ಣ ಮುಂದಿನ ನಿಸರ್ಗದಲ್ಲಿನ ಮಳೆ/ಗುಡುಗು/ಸಿಡಿಲು/ಕಾಳ್ಗಿಚ್ಚು/ಬಿರುಗಾಳಿ/'ಭೂಕಂಪ'/ಪ್ರವಾಹ/ಕಾಡು ಪ್ರಾಣಿಗಳಿಂದ ಉಂಟಾಗುವ ಅವಗಡಗಳಿಂದ ಪಾರಾಗಿ ಜೀವವನ್ನು ಉಳಿಸಿಕೊಳ್ಳಲು ಒಂದೊಂದು ಪ್ರಸಂಗಕ್ಕೂ ಒಬ್ಬೊಬ್ಬ ದೇವತೆಯನ್ನು ಕಲ್ಪಿಸಿಕೊಂಡು ಬಗೆಬಗೆಯ ಆಚರಣೆಗಳ ಮೂಲಕ ಪೂಜಿಸತೊಡಗಿದನು. ಅನಂತರದ ಕಾಲಮಾನದಲ್ಲಿ ಅಲೆಮಾರಿಯಾಗಿದ್ದ ಮಾನವ ಗುಂಪುಗಳು ಬೇಸಾಯದ ಮೂಲಕ ಒಂದೆಡೆ ನೆಲೆಯೂರಿ ನಿಂತು ಸಮಾಜ ರಚನೆಗೊಂಡಾಗ, ವರ್ಣ ಮತ್ತು ಜಾತಿಗಳ ಜತೆಗೆ ಆಸ್ತಿಯ ಹಕ್ಕು ದೊರೆತು ಉಳ್ಳವರು ಮತ್ತು ಇಲ್ಲದವರು ಎಂಬ ವರ್ಗ ರೂಪುಗೊಂಡಿತು.

ಬಡವರು ತಮ್ಮ ದಿನನಿತ್ಯದ ಅಗತ್ಯಗಳಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ, ಆರೋಗ್ಯಕ್ಕಾಗಿ ದೇವರಲ್ಲಿ ಮೊರೆಯಿಟ್ಟು, ಅವನ್ನು ಪಡೆಯುವುದಕ್ಕಾಗಿ ಪೂಜಿಸತೊಡಗಿದರೆ, ಜೀವನಕ್ಕೆ ಅಗತ್ಯವಾದುದೆಲ್ಲವನ್ನೂ ಹೊಂದಿರುವ ಸಿರಿವಂತರು ಮತ್ತು ದೊಡ್ಡ ದೊಡ್ಡ ಗದ್ದುಗೆಯನ್ನು ಏರಿ ಕುಳಿತವರು ತಮ್ಮ ಬಳಿಯಿರುವ ಸಂಪತ್ತನ್ನು ಕಾಪಾಡಿಕೊಂಡು, ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಸಂಪತ್ತನ್ನು ಗೋರಿಗುಡ್ಡೆ ಹಾಕಿಕೊಳ್ಳಲು ಮತ್ತು ತಮ್ಮ ಗದ್ದುಗೆಯನ್ನು ಉಳಿಸಿಕೊಳ್ಳುವುದಕ್ಕಾಗಿ ದೇವರನ್ನು ಪೂಜಿಸತೊಡಗಿದರು.

ಜನಸಮುದಾಯದ ಎಲ್ಲರ ಅಗತ್ಯಗಳಿಗೆ ಬಳಕೆಯಾಗಬೇಕಾಗಿದ್ದ ನಿಸರ್ಗ ಸಂಪತ್ತು ಮತ್ತು ಮಾನವ ದುಡಿಮೆಯಿಂದ ಉತ್ಪನ್ನಗೊಂಡ ವಸ್ತುಗಳು ಕೆಲವೇ ಸಿರಿವಂತರ ಕಯ್ ಸೇರಿ, ಹೆಚ್ಚಿನ ಸಂಕೆಯ ಬಡಜನರು ತಮ್ಮ ಪಾಲಿನದನ್ನು ಪಡೆಯಲಾಗದೆ ಹಸಿವು/ಬಡತನ/ಅಪಮಾನಗಳಿಂದ ನರಳತೊಡಗಿದರು. ಬಡವರಾಗಿರುವ ಜನರ ಸಂಕಟಗಳಿಗೆ ಅವರು ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪ ಪುಣ್ಯಗಳೇ ಕಾರಣವೆಂಬ ನಂಬಿಕೆಯನ್ನು ಸಿರಿವಂತರು ಮತ್ತು ಅಕ್ಕರವಂತರಾದ ಮೇಲು ಜಾತಿಯ ಜನರು ದೇವರು ಮತ್ತು 'ಧರ್ಮದ' ಹೆಸರಿನಲ್ಲಿ ಕಲೆ, ಸಾಹಿತ್ಯ, ಸಂಗೀತಗಳ ಮೂಲಕ ಜನಮನದಲ್ಲಿ ಬಿತ್ತಿದರು.

ಸಮಾಜದ ರಚನೆಯಲ್ಲಿರುವ ಜಾತಿ/ವರ್ಗ ತಾರತಮ್ಯದ ಕಟ್ಟುಪಾಡುಗಳು ಮತ್ತು ಉಳ್ಳವರು ಮಾಡುತ್ತಿರುವ ವಂಚನೆ/ಕ್ರೂರತನದ ನಡೆನುಡಿಗಳು ತಮ್ಮ ಬಾಳಿನ ಯಾತನೆಗೆ ಕಾರಣವೆಂಬುದನ್ನು ದುಡಿಯುವ ಸಮುದಾಯಕ್ಕೆ ಸೇರಿದ ಬಡವರು ಅರಿಯಲಾಗದೆ, ದೇವರನ್ನೇ ತಮ್ಮ ಬದುಕಿನ ಆಗುಹೋಗುಗಳಿಗೆ ಹೊಣೆಗಾರನನ್ನಾಗಿ

ಮಾಡಿಕೊಂಡರು. ಇದರಿಂದಾಗಿ ತಮ್ಮ ದುಡಿಮೆಯ ಸಂಪತ್ತನ್ನು ಕೊಳ್ಳೆಹೊಡೆದು ಸುಲಿಗೆ ಮಾಡುತ್ತಿರುವ ಉಳ್ಳವರನ್ನು ಮತ್ತು ಗದ್ದುಗೆಯಲ್ಲಿರುವ ವ್ಯಕ್ತಿಗಳನ್ನು ತಮ್ಮ ಹಗೆಗಳೆಂದು ಬಡವರು ಗುರುತಿಸಲಾಗಲಿಲ್ಲ.

ಸಿರಿವಂತರು ದೇಗುಲಗಳನ್ನು ಕಟ್ಟಿಸುವ ಮೂಲಕ ಬಡವರ ಮನದಲ್ಲಿ ದೇವರ ಬಗೆಗೆ ಇದ್ದ ನಂಬಿಕೆಯನ್ನು ಹೆಚ್ಚುಮಾಡಿದರು. ಇದರಿಂದ ಸಿರಿವಂತರ ಸುಲಿಗೆಯು ಯಾವುದೇ ಅಡಚಣೆಗಳಿಲ್ಲದೆ ಮುಂದುವರಿಯಲು ಅನುಕೂಲವಾಯಿತು. ದುಡಿಯುವ ವರ್ಗದ ಬಡವರೆಲ್ಲರೂ ಒಂದಾಗಿ ಜತೆಗೂಡಿ ಸಿರಿವಂತರ ಎದುರು ಹೋರಾಡಿ ತಮ್ಮ ದುಡಿಮೆಯ ನ್ಯಾಯಯುತವಾದ ಪಾಲನ್ನು ಪಡೆಯದಂತೆ ಬಡವರನ್ನು ತಡೆಗಟ್ಟಿರುವ ಶಕ್ತಿಯೇ ದೇವರಾಗಿದೆ.

ಏಕೆಂದರೆ ದೇವರನ್ನು ನಂಬಿದ ಬಡವರು ತಮ್ಮ ಈ ಜನ್ಮದ ಸಂಕಟಗಳಿಗೆ ತಾವು ಹಿಂದಿನ ಜನ್ಮಗಳಲ್ಲಿ ಮಾಡಿದ ಪಾಪ–ಪುಣ್ಯಗಳೇ ಕಾರಣವೆಂದು ತಿಳಿದು, ಅದಕ್ಕೆ ತಕ್ಕಂತೆ ತಮ್ಮ ಹಣೆಯಲ್ಲಿ ಬ್ರಹ್ಮನು ಬರೆದಿರುವ 'ವಿಧಿಬರಹ'ವನ್ನು ಇಲ್ಲವೇ ಹಣೆಬರಹವನ್ನು ಅಳಿಸಲಾಗದು/ಬದಲಾಯಿಸಲಾಗದು ಎಂದು ನಂಬಿದ್ದಾರೆ. ತಾವು ಈಗಿರುವ ನೆಲೆಯಲ್ಲಿಯೇ ಬದುಕನ್ನು ಕಳೆಯುವುದು ಅನಿವಾರ್ಯವೆಂದು ಒಪ್ಪಿಕೊಂಡು ಹಸಿವು/ಬಡತನ/ಅಪಮಾನದಲ್ಲಿಯೇ ಬೆಂದು ಬೂದಿಯಾಗುತ್ತಿದ್ದಾರೆ.

ಉಳ್ಳವರ ವಂಚನೆ/ಕ್ರೂರತನ/ಸುಲಿಗೆಯು ಹೆಚ್ಚಾದಂತೆಲ್ಲಾ ನಾಡಿನ ಉದ್ದಗಲದಲ್ಲಿ ಹೊಸ ಹೊಸ ದೇವಾಲಯಗಳ ಕಟ್ಟುವಿಕೆ ಮತ್ತು ಇರುವ ದೇವಾಲಯಗಳನ್ನು ಬೆಲೆಬಾಳುವ ವಸ್ತುಗಳಿಂದ ಅಲಂಕರಿಸಿ ಒಳಗುಡಿಯಲ್ಲಿರುವ ವಿಗ್ರಹಕ್ಕೆ ಚಿನ್ನ ಬೆಳ್ಳಿ ವಜ್ರದ ಒಡವೆಗಳನ್ನು ತೊಡಿಸಿ ದೇವರನ್ನು ಮೆರೆಸುವ ಆಚರಣೆಗಳು ಕಂಗೊಳಿಸ ತೊಡಗಿದವು. ಏಕೆಂದರೆ ಕೋಟಿಗಟ್ಟಲೆ ಜನರ ದಿನನಿತ್ಯದ ಬದುಕಿಗೆ ಅಗತ್ಯವಾದ ಸಂಪತ್ತನ್ನು ಲೂಟಿ ಮಾಡಿಟ್ಟಿರುವ ಹಣದಲ್ಲಿ ಒಂದು ಪಾಲನ್ನು ಈ ರೀತಿ ದೇವರ ಹೆಸರಿನಲ್ಲಿ ಉಳ್ಳವರು ವೆಚ್ಚಮಾಡಿ ಸಮಾಜದ ಮನ್ನಣೆಗೆ ಪಾತ್ರರಾದರು.

ಆದ್ದರಿಂದ ದೇಗುಲದ ನಿರ್ಮಾಣವು ಬಡವರಿಗೆ ಕೆಡುಕನ್ನುಂಟು ಮಾಡುತ್ತಿದ್ದರೆ, ಮೇಲು ಜಾತಿ ಮತ್ತು ಮೇಲು ವರ್ಗಕ್ಕೆ ಸೇರಿದ ಉಳ್ಳವರ ಮತ್ತು ಎತ್ತರದ ಗದ್ದುಗೆಯಲ್ಲಿ ಕುಳಿತು ಆಡಳಿತ ನಡೆಸುತ್ತಿರುವ ವ್ಯಕ್ತಿಗಳ ಹಿತವನ್ನು ಕಾಪಾಡುತ್ತಿದೆ.

೩) ತಮ್ಮ ಅಂಗಯ್ ಮೇಲೆ ಸಣ್ಣ ಆಕಾರದ ಲಿಂಗವನ್ನು ಇಟ್ಟುಕೊಂಡು ಪೂಜಿಸುತ್ತಿದ್ದ ಶಿವಶರಣಶರಣೆಯರ ಪಾಲಿಗೆ ದೇವರು ಎನ್ನುವುದು ವ್ಯಕ್ತಿಯ ಮಯ್ ಮನದಲ್ಲಿ ನಿರಂತರವಾಗಿ ಮೂಡುತ್ತಿರುವ ಒಳ್ಳೆಯ ಮತ್ತು ಕೆಟ್ಟ ಒಳಮಿಡಿತಗಳಲ್ಲಿ,

ಕೆಟ್ಟದ್ದನ್ನು ಹತ್ತಿಕ್ಕಿಕೊಂಡು ಸಾಮಾಜಿಕವಾಗಿ ಒಳ್ಳೆಯ ನಡೆನುಡಿಯಿಂದ ಬಾಳಲು ಅಗತ್ಯವಾದ ಅರಿವನ್ನು ನೀಡುವುದರ ಸಂಕೇತವಾಗಿತ್ತು.

ಉಳ್ಳವರು, ಮೇಲು ಜಾತಿಯವರು ಮತ್ತು ಅಕ್ಕರವಂತರು ದೇವರ ಹೆಸರಿನಲ್ಲಿ ಬಡವರ ಮನದಲ್ಲಿ ತಲೆತಲಾಂತರದಿಂದ ನಾಟಿಸಿದ್ದ ಕೀಳರಿಮೆ ಮತ್ತು ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಿ, ವ್ಯಕ್ತಿಯು ಒಳ್ಳೆಯ ನಡೆನುಡಿ ಮತ್ತು ಕಾಯಕವನ್ನು ಪ್ರಾಮಾಣಿಕವಾಗಿ ಮಾಡುವುದರ ಮೂಲಕ ತನ್ನ ಒಳಿತಿನ ಜತೆಜತೆಗೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬಹುದೆಂಬುದನ್ನು ಶಿವಶರಣಶರಣೆಯರು ತಮ್ಮ ನಡೆನುಡಿಗಳ ಮೂಲಕ ಮನಗಾಣಿಸಿದರು.

ಜನರ ಆಸೆಗಳನ್ನು ಈಡೇರಿಸುವ ಜಡವಸ್ತುವನ್ನಾಗಿ ದೇವರನ್ನು ಕಾಣದೆ, ಜನರಿಗೆ ಸತ್ಯ/ನೀತಿ/ನ್ಯಾಯದಿಂದ ಬಾಳಲು ಅಗತ್ಯವಾದ ಅರಿವನ್ನು ನೀಡುವ ಚೇತನವನ್ನಾಗಿ ಶಿವಶರಣೆಯರು ದೇವರನ್ನು ಕಂಡರು. ಕಲ್ಲು ಚಪ್ಪಡಿಗಳ ತಳಹದಿಯ ಮೇಲೆ ಕಟ್ಟುವ ದೇಗುಲದ ಬದಲು, ಒಳ್ಳೆಯ ನಡೆನುಡಿಗಳಿಂದ ಕೂಡಿದ ಸಾಮಾಜಿಕ ವ್ಯಕ್ತಿತ್ವದ ತಳಹದಿಯ ಮೇಲೆ ದೇವರನ್ನು ನೆಲೆಗೊಳಿಸಿದರು.



೩)  ಎನ್ನ ನಡೆಯೊಂದು ಪರಿ
ಎನ್ನ ನುಡಿಯೊಂದು ಪರಿ
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ

ನುಡಿಗೆ ತಕ್ಕ ನಡೆಯ ಕಂಡಡೆ
ಕೂಡಲಸಂಗಮದೇವನೊಳಗಿಪ್ಪನಯ್ಯಾ.

**ವ್ಯಕ್ತಿಯು ತನ್ನ ನಡೆನುಡಿಗಳನ್ನು ತಾನೇ ಒರೆಹಚ್ಚಿ ನೋಡಿಕೊಳ್ಳುತ್ತ, ತಾನು ಆಡುವ ಒಳ್ಳೆಯ ಮಾತಿಗೆ ತಕ್ಕಂತೆ ಒಳ್ಳೆಯ ಕೆಲಸವನ್ನು ಮಾಡಲಾಗದೆ ಕಳವಳಪಡುತ್ತಾ, ಒಳ್ಳೆಯ ನಡೆನುಡಿಗಳ ಮೂಲಕ ಬದುಕನ್ನು ರೂಪಿಸಿಕೊಳ್ಳಬೇಕೆಂಬ ಹಂಬಲದಿಂದ ಕಾತರಿಸುತ್ತಿರುವುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಎನ್ನ=ನನ್ನ; ನಡೆ+ಒಂದು; ನಡೆ=ನಡವಳಿಕೆ/ವರ್ತನೆ/ಮಾಡುವ ಕೆಲಸ/ಆಚರಣೆ; ಪರಿ=ರೀತಿ/ಬಗೆ; ನುಡಿ+ಒಂದು; ನುಡಿ=ಮಾತು/ಸೊಲ್ಲು;

ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ=ನಾನು ಆಡುವ ಮಾತುಗಳಿಗೂ ನಾನು ಮಾಡುವ ಕೆಲಸಗಳಿಗೂ ಯಾವುದೇ ನಂಟಿಲ್ಲ. ಹೇಳುವುದು ಒಂದು, ಮಾಡುವುದು ಮತ್ತೊಂದು/ಬಾಯಲ್ಲಿ ಒಳ್ಳೆಯ ಮಾತುಗಳನ್ನಾಡುತ್ತ, ನಿತ್ಯ ಜೀವನದಲ್ಲಿ ಕೆಟ್ಟ ಕೆಲಸಗಳಲ್ಲಿ ತೊಡಗಿದ್ದೇನೆ;

ಎನ್ನ+ಒಳಗೆ+ಏನೂ; ಒಳಗೆ=ಅಂತರಂಗದಲ್ಲಿ/ಮನದಲ್ಲಿ; ಏನೂ=ಯಾವುದೇ ಬಗೆಯ/ರೀತಿಯ; ಶುದ್ಧ+ಇಲ್ಲ; ಶುದ್ಧ=ಸರಿಯಾದುದು/ಚೊಕ್ಕಟವಾಗಿರುವುದು/ಶುಚಿಯಾಗಿರುವುದು; ಶುದ್ಧವಿಲ್ಲ=ಸರಿಯಾಗಿಲ್ಲ/ಚೊಕ್ಕಟವಾಗಿಲ್ಲ; ನೋಡು+ಅಯ್ಯಾ; ನೋಡು=ಕಾಣು/ತಿಳಿ/ಅರಿ;

ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ=ನನ್ನ ಮನದಲ್ಲಿ ಒಳ್ಳೆಯ ಚಿಂತನೆ/ಕಲ್ಪನೆಗಳು ಮೂಡುವುದರ ಜತೆಜತೆಗೆ ಕೆಟ್ಟ ಚಿಂತನೆ/ಕಲ್ಪನೆಗಳು ಸೇರಿಕೊಂಡು, ನನ್ನ ಮನಸ್ಸು ಗೊಂದಲಕ್ಕೆ/ಕಳವಳಕ್ಕೆ ಗುರಿಯಾಗಿದೆ;

ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ=ಪ್ರತಿಯೊಬ್ಬ ವ್ಯಕ್ತಿಯು ತನಗೆ ಅರಿವು ಬಂದ ಗಳಿಗೆಯಿಂದ ಸಾಯುವ ತನಕ ಜೀವನದ ಹಲವಾರು ಸನ್ನಿವೇಶಗಳಲ್ಲಿ ಆಡುವ ಮಾತು ಒಂದಾದರೆ, ಮಾಡುವ ಕೆಲಸವೇ ಮತ್ತೊಂದಾಗಿರುತ್ತದೆ. ವ್ಯಕ್ತಿಯ ಇಂತಹ ಇಬ್ಬಗೆಯ ವರ್ತನೆಗೆ ಕಾರಣವೇನೆಂಬುದನ್ನು ನಿಸರ್ಗದ ಮತ್ತು ಸಮಾಜದ ನೆಲೆಯಿಂದ ನೋಡಬೇಕು.

ಜಗತ್ತಿನಲ್ಲಿ ಹುಟ್ಟಿ ಬೆಳೆದು ಬಾಳಿ ಅಳಿಯುವ ಜೀವಿಗಳಲ್ಲಿ ಮಾನವ ಜೀವಿಯನ್ನು ಹೊರತುಪಡಿಸಿ, ಇನ್ನುಳಿದ ಪ್ರಾಣಿ/ಹಕ್ಕಿ/ಕ್ರಿಮಿಕೀಟಗಳೆಲ್ಲವೂ ನಿಸರ್ಗದ ನೆಲೆಯಲ್ಲಿ ಬೆತ್ತಲೆಯಾಗಿ ಅಂದರೆ ಮಯ್ ಮೇಲೆ ಯಾವುದೇ ಬಗೆಯ ಬಟ್ಟೆಯನ್ನು ತೊಡದೆ, ಬೆತ್ತಲೆಯಾಗಿಯೇ ಬಾಳಿ ಅಳಿಯುತ್ತವೆ. ಆದರೆ ಮಯ್ ಮೇಲೆ ಬಟ್ಟೆಯನ್ನು ತೊಟ್ಟಿರುವ ಮಾನವ ಜೀವಿಯು ಮಾತ್ರ ನಿಸರ್ಗದ ನೆಲೆಯಲ್ಲಿ ಇತ್ತ ಒಂದು ಪ್ರಾಣಿಯಾಗಿ, ಅತ್ತ ತಾನೇ ಕಟ್ಟಿಕೊಂಡಿರುವ ಸಮಾಜದ ನೆಲೆಯಲ್ಲಿ ಒಬ್ಬ ಸಾಮಾಜಿಕ ವ್ಯಕ್ತಿಯಾಗಿ ಬಾಳುತ್ತಿದ್ದಾನೆ. ಒಂದು ಕಡೆ ಅವನ ಮಯ್ ಮನ ಹೊಟ್ಟೆಯ ಹಸಿವನ್ನು ಹಿಂಗಿಸಿಕೊಳ್ಳಲು ಮತ್ತು ಕಾಮದ ನಂಟನ್ನು ಪಡೆಯಲು ತುಡಿಯುತ್ತಿದ್ದರೆ, ಮತ್ತೊಂದು ಎಡೆಯಲ್ಲಿ ಜಾತಿಮತಗಳ ಕಟ್ಟುಪಾಡು/ಸಂಪ್ರದಾಯ/ಆಡಳಿತದ ಕಾನೂನುಗಳಿಗೆ ವ್ಯಕ್ತಿಯ ನಡೆನುಡಿಗಳು ಒಳಪಟ್ಟಿರುತ್ತವೆ. ಆದುದರಿಂದ ನಿಸರ್ಗ ಸಹಜವಾದ ಹೊಟ್ಟೆಯ ಹಸಿವನ್ನು/ಮಯ್ಯಿನ ಕಾಮವನ್ನು/ಮನದ ಬಯಕೆಯನ್ನು ಸಮಾಜ ಮತ್ತು ಆಡಳಿತದ ನೀತಿನಿಯಮಗಳ ಎಲ್ಲೆಯೊಳಗೆ ಪೂರಯಿಸಿಕೊಳ್ಳಬೇಕಾಗಿದೆ.

ಇತರ ಜೀವಿಗಳ ಬದುಕಿನಲ್ಲಿ ಎದುರಾಗದ/ಇತರ ಜೀವಿಗಳ ಮನದಲ್ಲಿ ಇಲ್ಲದ "ಒಳಿತು/ಕೆಡುಕು, ಸರಿ/ತಪ್ಪು, ನೀತಿ/ಅನೀತಿ, ನ್ಯಾಯ/ಅನ್ಯಾಯದ ನಡೆನುಡಿಗಳೆಂಬ ಇಬ್ಬಗೆಯ ತಾಕಲಾಟಗಳು" ಮಾತು ಬಲ್ಲ ಮಾನವ ಜೀವಿಯನ್ನು ಕಾಡುತ್ತಿವೆ. ಮಾತು ಎಂಬುದು ಮಾನವ ಜೀವಿಯು ತನ್ನ ಮನದ ಒಳಮಿಡಿತಗಳನ್ನು ಮರೆಮಾಚಲು/ಮುಚ್ಚಿಡಲು ಬಳಸುವ ಒಂದು ಉಪಕರಣವಾಗಿಯೂ ಬಳಕೆಯಾಗುತ್ತಿದೆ.

ಈ ಎಲ್ಲ ಕಾರಣಗಳಿಂದಾಗಿ ಪ್ರತಿಯೊಬ್ಬ ವ್ಯಕ್ತಿಯು ತನ್ನ ಜೀವನದಲ್ಲಿ ಪಡೆಯುವ ಅರಿವು, ಆಡುವ ಮಾತು ಮತ್ತು ಮಾಡುವ ಕೆಲಸದ ನಡುವೆ ಹಲವಾರು ಸನ್ನಿವೇಶಗಳಲ್ಲಿ ಯಾವುದೇ ಬಗೆಯ ಹೊಂದಾಣಿಕೆಯಿಲ್ಲದೆ, ಅವೆಲ್ಲವೂ ಬೇರೆ ಬೇರೆಯಾಗಿರುತ್ತವೆ. ಇಂತಹ ಇಬ್ಬಗೆಯ ವ್ಯಕ್ತಿತ್ವವು ಮಾನವ ಸಮುದಾಯದಲ್ಲಿ ಗಂಡು ಹೆಣ್ಣು ಎನ್ನದೆ ಪ್ರತಿಯೊಬ್ಬರಲ್ಲೂ ಬೇರೆ ಬೇರೆ ಪ್ರಮಾಣದಲ್ಲಿ ಇದ್ದೇ ಇರುತ್ತದೆ;

ನುಡಿಗೆ=ಆಡುವ ಮಾತುಗಳಿಗೆ; ತಕ್ಕ=ಸರಿಯಾದ/ಸಮನಾದ/ಒಂದೇ ರೀತಿಯಲ್ಲಿರುವ; ನಡೆಯ=ವರ್ತನೆಯನ್ನು/ಕೆಲಸವನ್ನು/ಆಚರಣೆಯನ್ನು; ಕಾಣ್=ನೋಡು/ತಿಳಿ/ಅರಿ; ಕಂಡಡೆ=ನೋಡಿದರೆ/ಅರಿತುಕೊಂಡರೆ/ತಿಳಿದುಕೊಂಡರೆ; ಕೂಡಲಸಂಗಮದೇವನ್+ಒಳಗೆ+ಇಪ್ಪನ್+ಅಯ್ಯಾ; ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತನಾಮ; ಇಪ್ಪನ್=ಇರುವನು;

ನುಡಿಗೆ ತಕ್ಕ ನಡೆಯ ಕಂಡಡೆ ಕೂಡಲಸಂಗಮದೇವನೊಳಗಿಪ್ಪನಯ್ಯಾ=ವ್ಯಕ್ತಿಯು ಆಡುವ ಒಳ್ಳೆಯ ಮಾತಿಗೆ ತಕ್ಕಂತೆ ಅವನು ಒಳ್ಳೆಯ ಕೆಲಸವನ್ನು ಮಾಡಿದರೆ, ಅಂತಹವರನ್ನು ದೇವರು ಮೆಚ್ಚಿಕೊಳ್ಳುತ್ತಾನೆ. ಶಿವಶರಣಶರಣೆಯರು ವ್ಯಕ್ತಿಯ ಒಳ್ಳೆಯ ನಡೆನುಡಿಗಳೇ ದೇವರು ಎಂಬ ನಿಲುವನ್ನು ಹೊಂದಿದ್ದರು.)



೪)  ಎನ್ನವರೊಲಿದು
ಹೊನ್ನಶೂಲದಲ್ಲಿಕ್ಕಿದರೆನ್ನ
ಹೊಗಳಿ ಹೊಗಳಿ

ಎನ್ನ ಹೊಗಳತೆ
ಎನ್ನನಿಮ್ಮೈಗೊಂಡಿತ್ತಲ್ಲಾ
ಅಯ್ಯೋ ನೊಂದೆನು ಸೈರಿಸಲಾರೆನು

ಅಯ್ಯಾ ನಿಮ್ಮ ಮನ್ನಣೆಯೆ
ಮಸೆದಲಗಾಗಿ ತಾಗಿತಲ್ಲಾ
ಅಯ್ಯೋ ನೊಂದೆನು ಸೈರಿಸಲಾರೆನು

ಕೂಡಲಸಂಗಮದೇವಾ
ನೀನೆನಗೆ ಒಳ್ಳಿದನಾದಡೆ
ಎನ್ನ ಹೊಗಳತೆಗಡ್ಡ ಬಾರಾ ಧರ್ಮಿ.

**ತನ್ನ ನಡೆನುಡಿಗಳನ್ನು ಕುರಿತು ಸುತ್ತಮುತ್ತಣ ಜನರು ಹೊಗಳಿಕೆಯ ಮಾತುಗಳನ್ನು ಎಡೆಬಿಡದೆ ಒಂದೇ ಸಮನೆ ಆಡತೊಡಗಿದಾಗ, ಹೊಗಳಿಕೆಗೆ ಗುರಿಯಾದ ವ್ಯಕ್ತಿಯು ತನ್ನ ಮನದಲ್ಲಿ ಉಂಟಾಗುತ್ತಿರುವ ತಲ್ಲಣಗಳನ್ನು ಈ ವಚನದಲ್ಲಿ ಹೇಳಿಕೊಂಡಿದ್ದಾನೆ.**

(ಎನ್ನ್+ಅವರ್+ಒಲಿದು; ಎನ್=ನಾನು; ಎನ್ನ=ನನ್ನ; ಎನ್ನವರ್=ನನ್ನವರು/ನನ್ನೊಡನೆ ನಂಟನ್ನು ಹೊಂದಿರುವ ವ್ಯಕ್ತಿಗಳು/ನನ್ನ ಒಡನಾಡಿಗಳು/ನನ್ನ ನೆರೆಹೊರೆಯವರು; ಒಲಿ=ಮೆಚ್ಚು/ಪ್ರೀತಿಸು/ಒಪ್ಪು; ಒಲಿದು=ಮೆಚ್ಚಿಕೊಂಡು/ಪ್ರೀತಿಸುತ್ತ/ಒಪ್ಪಿಕೊಂಡು; ಎನ್ನವರೊಲಿದು=ನನ್ನೊಡನೆ ನಂಟನ್ನು ಹೊಂದಿರುವ ವ್ಯಕ್ತಿಗಳು ನನ್ನನ್ನು ಬಹಳವಾಗಿ ಮೆಚ್ಚಿಕೊಂಡು/ಒಪ್ಪಿಕೊಂಡು/ಪ್ರೀತಿಸುತ್ತ;

ಹೊನ್ನಶೂಲ+ಅಲ್ಲಿ+ಇಕ್ಕಿದರ್+ಎನ್ನ; ಹೊನ್ನು=ಚಿನ್ನ/ಬಂಗಾರ/ಸ್ವರ್ಣ/ಕಸವರ; ಶೂಲ=ಮರಣದಂಡನೆಗೆ ಗುರಿಯಾದ ವ್ಯಕ್ತಿಯ ಕೊರಳಿಗೆ ಹಾಕುವ ಉರುಳಿನಿಂದ ಕೂಡಿದ ನೇಣುಗಂಬ. ಈ ನೇಣುಗಂಬವನ್ನು ಮರ ಇಲ್ಲವೇ ಕಬ್ಬಿಣದ ಕಂಬ ಮತ್ತು ತೊಲೆಗಳಿಂದ ಮಾಡಿರುತ್ತಾರೆ; ಹೊನ್ನಶೂಲ=ಚಿನ್ನದ ಹೊರಕವಚದಿಂದ ಕೂಡಿದ ಕಂಬ ಮತ್ತು ತೊಲೆಗಳಿಂದ ಮಾಡಿರುವ ಶೂಲ; ಇಕ್ಕು=ಹಾಕು/ಇಡು; ಇಕ್ಕಿದರ್= ಹಾಕಿದರು/ಏರಿಸಿದರು;

ಹೊಗಳು=ಯಾವುದೇ ವಸ್ತು-ಜೀವಿ-ವ್ಯಕ್ತಿಯ ಬಗ್ಗೆ ಮಾತನಾಡುವಾಗ, ಅದರಲ್ಲಿ/ ಅವನಲ್ಲಿ ಕಂಡುಬರುವ ವಾಸ್ತವ ಸಂಗತಿಗಳ ಜತೆಗೆ ಇಲ್ಲಸಲ್ಲದ ಸಂಗತಿಗಳನ್ನು ಸೇರಿಸಿಕೊಂಡು ಅತಿಯಾಗಿ ಗುಣಗಾನ ಮಾಡುವುದು/ಕೊಂಡಾಡುವುದು/ಬಣ್ಣಿಸುವುದು/ ಸ್ತುತಿಸುವುದು; ಹೊಗಳಿ=ಹೊಗಳುತ್ತ/ಕೊಂಡಾಡುತ್ತ/ಬಣ್ಣಿಸುತ್ತ;

ಎನ್ನವರೊಲಿದು ಹೊನ್ನಶೂಲದಲ್ಲಿಕ್ಕಿದರೆನ್ನ ಹೊಗಳಿ ಹೊಗಳಿ=ನನ್ನ ನಡೆನುಡಿಗಳನ್ನು ಮೆಚ್ಚಿಕೊಂಡ ವ್ಯಕ್ತಿಗಳು ಎಡೆಬಿಡದೆ ಗುಣಗಾನ ಮಾಡತೊಡಗಿ ನನ್ನನ್ನು ಹೊನ್ನ ಶೂಲಕ್ಕೇರಿಸಿದರು;

'ಹೊನ್ನಶೂಲದಲ್ಲಿಕ್ಕಿದರು' ಎಂಬ ಪದಕಂತೆಯು ರೂಪಕವಾಗಿ ಬಳಕೆಗೊಂಡಿದೆ.

ಹೊನ್ನಶೂಲದ ಉರುಳಿಗೆ ವ್ಯಕ್ತಿಯ ಕೊರಳನ್ನಿಕ್ಕಿ ವ್ಯಕ್ತಿಯ ಜೀವವನ್ನು ತೆಗೆಯುವ ಕ್ರಿಯೆಯನ್ನು ವ್ಯಕ್ತಿಯನ್ನು ಬಣ್ಣಬಣ್ಣದ ಮಾತುಗಳಿಂದ ಹೊಗಳಿ ಕೊಂಡಾಡುವ ಕ್ರಿಯೆಯೊಡನೆ ಜೋಡಿಸಲಾಗಿದೆ. ಶೂಲವು ಹೊನ್ನಿನಿಂದ ನಿರ್ಮಾಣಗೊಂಡಿದ್ದರೂ ಅದರ ಪರಿಣಾಮ ಮಾತ್ರ ಇನ್ನುಳಿದ ಮರದ/ಕಬ್ಬಿಣದ ಶೂಲದಂತೆಯೇ ಇರುತ್ತದೆ.

ನೋಡುವ ಕಣ್ಣುಗಳಿಗೆ ಹೊನ್ನಿನ ಕಾಂತಿಯಿಂದ ಶೂಲ ಕಂಗೊಳಿಸುವಂತೆ, ವ್ಯಕ್ತಿಯ ಬಗ್ಗೆ ಆಡುತ್ತಿರುವ ಹೊಗಳಿಕೆಯ ಮಾತುಗಳು ವ್ಯಕ್ತಿಗೆ ಅಪಾರವಾದ ಆನಂದ ಮತ್ತು ಹೆಮ್ಮೆಯನ್ನುಂಟುಮಾಡುತ್ತವೆ. ಚಿನ್ನದ ಶೂಲವಾಗಿದ್ದರೂ ಸಾವು ತಪ್ಪುವುದಿಲ್ಲ. ಚಿನ್ನದ ಶೂಲಕ್ಕೆ ಹಾಕಿದ ವ್ಯಕ್ತಿಯು ಜೀವವನ್ನು ಕಳೆದುಕೊಂಡರೆ, ಹೊಗಳಿಕೆಯ ನುಡಿಗಳಿಗೆ ಮರುಳಾದ ವ್ಯಕ್ತಿಯು ತನ್ನಲ್ಲಿದ್ದ ಒಳ್ಳೆಯ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಾನೆ. ಏಕೆಂದರೆ ತನ್ನನ್ನು ಮೆಚ್ಚಿಕೊಂಡವರು ಮತ್ತು ತನ್ನವರು ಆಡುವ ಹೊಗಳಿಕೆಯ ನುಡಿಯನ್ನು ಕೇಳಕೇಳುತ್ತಿದ್ದಂತೆಯೇ, ವ್ಯಕ್ತಿಯ ಮನದಲ್ಲಿ ತಾನು ಇತರರಿಗಿಂತ ಹೆಚ್ಚಾಗಿ ತಿಳಿದವನು/ದೊಡ್ಡವನು/ಒಳ್ಳೆಯವನು/ನನ್ನಿಂದಲೇ ಎಲ್ಲವೂ ಆಗುತ್ತಿದೆ ಎಂಬ ಅಹಂಕಾರದ/ಒಣಹೆಮ್ಮೆಯ ಒಳಮಿಡಿತಗಳು ಮೂಡತೊಡಗುತ್ತವೆ.

ಹೊಗಳಿಕೆಯ ಮಾತಿನ ಗುಂಗಿನಲ್ಲಿ ಸಿಲುಕಿದ ವ್ಯಕ್ತಿಯು ತನ್ನ ಹೆಸರು ಮತ್ತು ತಾನು ಮಾಡುತ್ತಿರುವ ಕೆಲಸವು ಜನಮನದಲ್ಲಿ ಸದಾಕಾಲ ಶಾಶ್ವತವಾಗಿ ನೆಲಸುತ್ತದೆಯೆಂಬ ಕೀರ್ತಿಶನಿಗೆ ಒಳಗಾಗುತ್ತಾನೆ. ಹೊಗಳಿಕೆಯ ನುಡಿಗಳಿಂದ ಮಯ್ ಮರೆತು, ಸೊಕ್ಕಿನ ನಡೆನುಡಿಗಳಿಂದ ತನ್ನನ್ನು ತಾನೇ ಮೆರೆಸಿಕೊಳ್ಳುವುದರಲ್ಲಿ ಮಗ್ನನಾಗುತ್ತಾನೆ. ಸದ್ದುಗದ್ದಲವಿಲ್ಲದೆ/ಆಡಂಬರವಿಲ್ಲದೆ/ತೋರಿಕೆಯಿಲ್ಲದೆ ತನ್ನ ಪಾಡಿಗೆ ತಾನು ಜನಸಮುದಾಯಕ್ಕೆ ಒಳಿತನ್ನುಂಟುಮಾಡುತ್ತಿದ್ದ ವ್ಯಕ್ತಿಯ ಪಾಲಿಗೆ ಹೊಗಳಿಕೆಯೆಂಬುದು ಕೇಡನ್ನು ಬಗೆಯುವ ಸಂಗತಿಯಾಗುತ್ತದೆ;

ಹೊಗಳತೆ=ಹೊಗಳಿಕೆ/ಕೊಂಡಾಟ/ಪ್ರಶಂಸೆ/ಮೆಚ್ಚುಗೆಯ ನುಡಿಗಳು; ಎನ್ನ ಹೊಗಳತೆ=ನನ್ನನ್ನು ಕುರಿತು ಆಡಿದ ಮೆಚ್ಚುಗೆಯ/ಗುಣಗಾನದ/ಪ್ರಶಂಸೆಯ ಮಾತುಗಳು; ಎನ್+ಅನ್+ಇಮ್ಮೈ+ಕೊಂಡು+ಇತ್ತು+ಅಲ್ಲಾ; ಎನ್ನನ್=ನನ್ನನ್ನು; ಎರಡು+ಮೆಯ್=ಇಮ್ಮೈ; ಮೆಯ್=ದೇಹ/ಶರೀರ; ಇಮ್ಮೈ=ಎರಡು ತುಂಡಾದ ಮೆಯ್/ ದೇಹ/ಶರೀರ; ಕೊಳ್=ಮುಟ್ಟು/ಬಡಿ/ಕಡಿ; ಕೊಂಡಿತ್ತು=ಕತ್ತರಿಸಿತ್ತು/ಕಡಿದು ತುಂಡರಿಸಿತ್ತು; ಇಮ್ಮೈಗೊಂಡಿತ್ತು=ಒಂದು ದೇಹವು ಎರಡು ತುಂಡಾಯಿತು;

ಅಲ್ಲಾ=ಆ ರೀತಿಯಲ್ಲಿ/ಬಗೆಯಲ್ಲಿ ಆಯಿತು; ಅಯ್ಯೋ=ಸಂಕಟ/ನೋವು/ ಯಾತನೆಯ ಒಳಮಿಡಿತವನ್ನು ಹೊರಹಾಕುವಾಗ ಬಳಸುವ ಪದ; ನೋವು=ಬೇನೆ/ ಅಳಲು/ವೇದನೆ; ನೊಂದೆನು=ಸಂಕಟಕ್ಕೆ ಒಳಗಾಗಿ ನರಳುತ್ತಿರುವೆನು; ಸೈರಿಸಲ್+ಆರೆನು; ಸೈರಿಸು=ತಾಳು/ಸಹಿಸು/ತಡೆದುಕೊಳ್ಳು; ಆರ್=ಶಕ್ತನಾಗು/ಕಸುವುಳ್ಳವನು/ಬಲವುಳ್ಳವನು; ಆರೆನು=ನನ್ನಲ್ಲಿ ಬಲವಿಲ್ಲ/ಶಕ್ತಿಯಿಲ್ಲ/ಕಸುವಿಲ್ಲ; ಸೈರಿಸಲಾರೆನು=ನನ್ನಿಂದ ತಡೆದುಕೊಳ್ಳಲು ಆಗುತ್ತಿಲ್ಲ/ಸಹಿಸುವುದಕ್ಕೆ ಆಗುತ್ತಿಲ್ಲ;

ಎನ್ನ ಹೊಗಳತೆ ಎನ್ನನಿಮ್ಮೈಗೊಂಡಿತ್ತಲ್ಲಾ ಅಯ್ಯೋ ನೊಂದೆನು ಸೈರಿಸಲಾರೆನು= ನನ್ನ ಬಗ್ಗೆ ಆಡುತ್ತಿರುವ ಹೊಗಳಿಕೆಯ ನುಡಿಗಳು ನನ್ನ ದೇಹವನ್ನು ಎರಡು ತುಂಡಾಗಿ ಸೀಳುತ್ತಿವೆ. ದೇಹವು ಎರಡು ಹೋಳುಗಳಾಗುವ ಕ್ರಿಯೆಯನ್ನು ವ್ಯಕ್ತಿಯ ವ್ಯಕ್ತಿತ್ವದಲ್ಲಿ ಉಂಟಾಗುವ ಒಡಕನ್ನು ಕುರಿತು ಒಂದು ರೂಪಕವಾಗಿ ಬಳಸಲಾಗಿದೆ.

'ವ್ಯಕ್ತಿತ್ವದಲ್ಲಿ ಒಡಕು ಉಂಟಾಗುವುದು' ಎಂದರೆ ವ್ಯಕ್ತಿಯ ಮನದಲ್ಲಿ ಇಬ್ಬಗೆಯ ಒಳಮಿಡಿತಗಳು ಮೂಡುವುದು. ಇದುವರೆಗೂ ಒಳ್ಳೆಯ ಉದ್ದೇಶಗಳಿಂದ ಕೂಡಿದ್ದ ವ್ಯಕ್ತಿಯ ಮನದಲ್ಲಿ ಈಗ ಕೆಟ್ಟ ಒಳಮಿಡಿತಗಳು ತುಡಿಯತೊಡಗುತ್ತವೆ. ಈಗ ವ್ಯಕ್ತಿಯು ಬಾಯಲ್ಲಿ ಹೇಳುವುದು ಒಂದಾದರೆ, ಕಯ್ಯಲ್ಲಿ ಮಾಡುವುದು ಮತ್ತೊಂದಾಗುತ್ತದೆ. ಇದರಿಂದಾಗಿ ವ್ಯಕ್ತಿಯ ನಡೆನುಡಿಯಲ್ಲಿ ಹೊಂದಾಣಿಕೆಯು ತಪ್ಪುತ್ತದೆ. ಹೊಗಳಿಕೆಯ ನುಡಿಗಳಿಗೆ ಮನಗೊಟ್ಟಂತೆಲ್ಲಾ ವ್ಯಕ್ತಿಯಲ್ಲಿದ್ದ ಒಳ್ಳೆಯ ವ್ಯಕ್ತಿತ್ವ ಹಾಳಾಗತೊಡಗುತ್ತದೆ.

ತನ್ನ ವ್ಯಕ್ತಿತ್ವದಲ್ಲಿ ಆಗುತ್ತಿರುವ ಇಂತಹ ಬದಲಾವಣೆಯ ಬಗ್ಗೆ ಎಚ್ಚರವನ್ನುಳ್ಳ ವ್ಯಕ್ತಿಯು ಹೊಗಳಿಕೆಯಿಂದ ಉಂಟಾದ ಈ ಬಗೆಯ ಪೆಟ್ಟನ್ನು ತನ್ನಿಂದ ತಡೆದುಕೊಳ್ಳಲಾಗುತ್ತಿಲ್ಲವೆಂದು ಕಂಗಾಲಾಗಿದ್ದಾನೆ.

ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ನಿಮ್ಮ=ಹೊಗಳುತ್ತಿರುವ ವ್ಯಕ್ತಿಗಳ; ಮನ್ನಣೆ=ಮರ್ಯಾದೆ/ಹೆಚ್ಚಿನ ಒಲವು; ಮಸೆದ+ ಅಲಗು+ಆಗಿ; ಮಸೆ=ಲೋಹದಿಂದ ಮಾಡಿರುವ ಕತ್ತಿ/ಚಾಕು/ಚೂರಿ ಮುಂತಾದ ಹತಾರಗಳ ಅಂಚನ್ನು/ಬಾಯನ್ನು ಹರಿತಗೊಳಿಸಲೆಂದು/ಚೂಪು ಮಾಡಲೆಂದು ಕಲ್ಲಿನ ಮೇಲೆ ಉಜ್ಜುವುದು/ತಿಕ್ಕುವುದು; ಮಸೆದ=ಹರಿತಗೊಳಿಸಿದ/ಚೂಪನ್ನಾಗಿಸಿದ; ಅಲಗು=ಕತ್ತಿ/ಕರವಾಳು/ಕಡುಗ; ಮಸೆದಲಗು=ಹರಿತಗೊಳಿಸಿರುವ ಕತ್ತಿ; ತಾಗು+ ಇತ್ತು+ಅಲ್ಲಾ;ತಾಗು=ಚುಚ್ಚು/ನಾಟು/ತಿವಿ/ಮುಟ್ಟು; ತಾಗಿತ್ತಲ್ಲಾ= ಚುಚ್ಚಿಕೊಂಡಿರುವುದು/ ನಾಟಿಕೊಂಡಿರುವುದು;

ನಿಮ್ಮ ಮನ್ನಣೆಯೆ ಮಸೆದಲಗಾಗಿ ತಾಗಿತ್ತಲ್ಲಾ ಅಯ್ಯೋ ನೊಂದೆನು ಸೈರಿಸಲಾರೆನು=ಹಾಡಿ ಹೊಗಳುತ್ತಿರುವವರು ಮಾಡುತ್ತಿರುವ ಗುಣಗಾನ/ ಸುತ್ತಮುತ್ತಲಿನವರು ತೋರಿಸುತ್ತಿರುವ ಹೆಚ್ಚಿನ ಮನ್ನಣೆಯು ವ್ಯಕ್ತಿಯನ್ನು ಹರಿತವಾದ ಕತ್ತಿಯಿಂದ ಚುಚ್ಚಿ ತಿವಿದು ಗಾಸಿಗೊಳಿಸಿದಂತೆ ಯಾತನೆಯನ್ನುಂಟುಮಾಡುತ್ತಿದೆ. ಈ ಬಗೆಯ ಮಾನಸಿಕ ಯಾತನೆಯನ್ನು ವ್ಯಕ್ತಿಗೆ ಸಹಿಸಿಕೊಳ್ಳಲಾಗುತ್ತಿಲ್ಲ; ಮಸೆದ ಅಲಗು ತಾಗಿದಾಗ ಉಂಟಾಗುವ ಪರಿಣಾಮವನ್ನು ಹೊಗಳಿಕೆಯಿಂದ ಉಂಟಾಗುವ ಯಾತನೆ/ ಕೇಡು/ಸಂಕಟಕ್ಕೆ ಒಂದು ರೂಪಕವಾಗಿ ಬಳಸಲಾಗಿದೆ;

ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತನಾಮ;

ನೀನ್+ಎನಗೆ; ನೀನು=ದೇವರಾದ ಶಿವ/ಈಶ್ವರ; ಎನಗೆ=ನನಗೆ; ಒಳ್ಳಿದನ್+ಆದಡೆ; ಒಳ್=ಒಳ್ಳೆಯದು/ಒಳಿತಿನಿಂದ ಕೂಡಿರುವುದು; ಒಳ್ಳಿದನ್=ಒಳ್ಳೆಯವನು/ಒಳಿತನ್ನು ಮಾಡುವವನು; ಆದಡೆ=ಆಗಿದ್ದರೆ; ಹೊಗಳತೆಗೆ+ಅಡ್ಡ; ಅಡ್ಡ=ತಡೆ/ಎದುರುಗಡೆ ಅಡ್ಡಿಯಾಗಿರುವುದು/ತಡೆಗಟ್ಟುವುದು/ಆಗದಂತೆ ತಡೆಯುವುದು; ಬರ್=ಆಗಮಿಸುವುದು/ ಬರುವುದು; ಬಾರಾ=ಬರುವಂತಹವನಾಗು; ಧರ್ಮಿ=ಕರುಣೆಯುಳ್ಳವನು/ಒಲವಿನಿಂದ ಕಾಪಾಡುವವನು;

ಕೂಡಲಸಂಗಮದೇವಾ ನೀನೆನಗೆ ಒಳ್ಳಿದನಾದಡೆ ಎನ್ನ ಹೊಗಳತೆಗೆ ಅಡ್ಡ ಬಾರಾ ಧರ್ಮಿ=ಹೊಗಳಿಕೆಯಿಂದ ತನ್ನನ್ನು ಕಾಪಾಡುವಂತೆ ಒಳಿತಿನ ನಡೆನುಡಿಗಳ ಸಂಕೇತವಾಗಿರುವ ಕೂಡಲಸಂಗಮದೇವನಲ್ಲಿ ವ್ಯಕ್ತಿಯು ಮೊರೆಯಿಡುತ್ತಿದ್ದಾನೆ.



೫)　ಏನಿ ಬಂದಿರಿ
ಹದುಳಿದ್ದಿರೆ ಎಂದಡೆ
ನಿಮ್ಮೈಸಿರಿ ಹಾರಿ ಹೋಹುದೆ

ಕುಳ್ಳಿರೆಂದಡೆ
ನೆಲ ಕುಳಿ ಹೋಹುದೆ

ಒಡನೆ ನುಡಿದರೆ
ಸಿರ ಹೊಟ್ಟೆಯೊಡೆವುದೆ .

ಕೊಡಲಿಲ್ಲದಿದ್ದಡೊಂದು ಗುಣವಿಲ್ಲದಿದ್ದಡೆ
ಮೂಗ ಕೊಯ್ವುದ ಮಾಬನೆ
ಕೂಡಲಸಂಗಮದೇವಯ್ಯ.

**ತನ್ನಿಂದ ನೆರವನ್ನು ಬಯಸಿ ಬಳಿಗೆ ಬಂದವರನ್ನು ವ್ಯಕ್ತಿಯು ಹೇಗೆ ಕಾಣಬೇಕು/ ಅವರೊಡನೆ ಯಾವ ರೀತಿ ನಡೆದುಕೊಳ್ಳಬೇಕು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಏನ್=ಯಾವುದು; ಏನಿ=ಏನ್ರಿ / ವ್ಯಕ್ತಿಯನ್ನು ಒಲವು ನಲಿವಿನಿಂದ ಮಾತನಾಡಿಸುವಾಗ "ಏನ್ರಿ" ಎಂಬ ಬಹುವಚನರೂಪದ ಪದವನ್ನು ಬಳಸಲಾಗುತ್ತದೆ/ ಮಾತಿನ ಸನ್ನಿವೇಶದಲ್ಲಿ ಉಚ್ಚಾರಣೆಗೊಳ್ಳುವಾಗ 'ಏನ್ರಿ' ಎಂಬುದು 'ಏನಿ' ಎಂದಾಗಿದೆ; ಬಂದಿರಿ=ಬಂದಿದ್ದೀರಿ; ಏನಿ ಬಂದಿರಿ=ಯಾತಕ್ಕಾಗಿ ಬಂದಿರಿ/ನಿಮ್ಮ ಬರುವಿಕೆಯ ಉದ್ದೇಶವೇನು;

ಹದುಳ+ಇದ್ದಿರೆ; ಹದುಳ=ನೆಮ್ಮದಿ/ನಲಿವು/ಆರೋಗ್ಯ/ಒಳಿತು/ಆನಂದ; ಇದ್ದಿರೆ=ಇದ್ದೀರಾ/ಇರುವಿರಾ; ಹದುಳಿದ್ದಿರೆ=ಚೆನ್ನಾಗಿದ್ದೀರಾ/ಆರೋಗ್ಯವಾಗಿದ್ದೀರಾ; ಎಂದಡೆ=ಎಂದರೆ/ಎಂದು ಕೇಳಿದರೆ/ವಿಚಾರಿಸಿಕೊಂಡರೆ; ನಿಮ್ಮ+ಐಸಿರಿ; 'ಐಶ್ವರ್ಯ'>ಐಸಿರಿ; ಐಸಿರಿ=ಸಿರಿವಂತಿಕೆ/ಸಂಪತ್ತು/ಒಡವೆ ವಸ್ತು/ಆಸ್ತಿಪಾಸ್ತಿ/ಗದ್ದುಗೆ;

ನಿಮ್ಮ+ಸಿರಿ=ನಿಮ್ಮ ಬಳಿಯಿರುವ ಸಂಪತ್ತು/ಸಿರಿವಂತಿಕೆ/ಆಸ್ತಿಪಾಸ್ತಿ/ಒಡವೆ ವಸ್ತು/ಗದ್ದುಗೆ; ಹಾರು=ಜಿಗಿ/ಎಗರು/ಇಲ್ಲವಾಗು/ಕಳೆದುಹೋಗು/ಹಾಳಾಗು; ಹೋಹುದೆ=ಹೋಗುವುದೆ; ಹಾರಿ ಹೋಹುದೆ= ಹಾಳಾಗುವುದೇ/ಇಲ್ಲವಾಗುವುದೇ/ಕಳೆದು ಹೋಗುವುದೇ;

ಏನಿ ಬಂದಿರಿ ಹದುಳಿದ್ದಿರೆ ಎಂದಡೆ ನಿಮ್ಮ+ಸಿರಿ ಹಾರಿ ಹೋಹುದೆ=ಇತರರು ತಮ್ಮ ಜೀವನದ ಸಂಕಟವನ್ನು ನಿಮ್ಮೊಡನೆ ಹೇಳಿಕೊಂಡು, ತಮ್ಮ ಯಾತನೆಯ ನಿವಾರಣೆಗೆ ನಿಮ್ಮಿಂದ ಪರಿಹಾರವನ್ನು ಪಡೆಯಲೆಂದು/ಏನನ್ನಾದರೂ ಯಾಚಿಸಲೆಂದು ನಿಮ್ಮ ಬಳಿಗೆ ಬಂದಾಗ, ಅವರನ್ನು "ಏನು ಬಂದಿರಿ, ಚೆನ್ನಾಗಿದ್ದೀರಾ" ಎಂದು ಒಲವಿನಿಂದ ಮಾತನಾಡಿಸಿದ ಮಾತ್ರಕ್ಕೆ, ನಿಮ್ಮ ಸಿರಿವಂತಿಕೆಯೆಲ್ಲವೂ ಹಾಳಾಗಿ ಹೋಗುತ್ತದೆಯೇ/ ಕಣ್ಮರೆಯಾಗುವುದೇ/ನಿಮ್ಮ ಕಯ್ ತಪ್ಪಿ ಅವರ ಪಾಲಾಗುತ್ತದೆಯೇ;

ಕುಳ್ಳಿರಿ+ಎಂದಡೆ; ಕುಳ್=ಕುಳಿತುಕೊಳ್ಳುವುದು; ಕುಳ್ಳಿರಿ=ಕುಳಿತುಕೊಳ್ಳಿ; ನೆಲ=ಜಾಗ/ ಎಡೆ; ಕುಳಿ=ಗುಣಿ/ತಗ್ಗು/ಹಳ್ಳ; ಕುಳ್ಳಿರೆಂದಡೆ ನೆಲ ಕುಳಿಹೋಹುದೆ=ಕುಳಿತುಕೊಳ್ಳಿ ಎಂದು ಹೇಳಿದರೆ, ಅವರು ಕುಳಿತುಕೊಳ್ಳುವ ಜಾಗದ ನೆಲ ಗುಳಿ ಬೀಳುವುದೆ/ನೆಲ ಕುಸಿಯುವುದೆ;

ಒಡನೆ=ಕೂಡಲೇ/ಬೇಗನೆ/ಮರುಗಳಿಗೆಯಲ್ಲೇ; ನುಡಿ=ಮಾತು/ಸೊಲ್ಲು; ಒಡನೆ ನುಡಿದರೆ=ಅವರು ನಿಮ್ಮ ಬಳಿಗೆ ಬರುತ್ತಿದ್ದಂತೆಯೇ/ಅವರನ್ನು ಕಂಡಕೂಡಲೇ ಅವರನ್ನು ಮಾತನಾಡಿಸಿದರೆ; ಶಿರ>ಸಿರ; ಸಿರ=ತಲೆ/ಬುಂಡೆ; ಹೊಟ್ಟೆ+ಒಡೆವುದೆ; ಹೊಟ್ಟೆ=ಒಡಲು/ ಉದರ; ಒಡೆ=ಸೀಳು/ಬಿರಿ/ಚೂರುಚೂರಾಗು/ಹೋಳಾಗು;

ಒಡನೆ ನುಡಿದರೆ ಸಿರ ಹೊಟ್ಟೆಯೊಡೆವುದೆ=ಅವರು ನಿಮ್ಮ ಬಳಿಗೆ ಬರುತ್ತಿದ್ದಂತೆಯೇ/ ಅವರನ್ನು ಕಂಡ ಕೂಡಲೇ ಮಾತನಾಡಿಸಿದರೆ, ನಿಮ್ಮ ತಲೆಯೊಡೆದು ಹೊಟ್ಟೆ ಹೋಳಾಗುವುದೆ/ನಿಮ್ಮ ಜೀವ ಹೋಗುವುದೆ;

ಕೊಡಲ್+ಇಲ್ಲದೆ+ಇದ್ದಡೆ+ಒಂದು; ಕೊಡು=ನೀಡು/ದಾನಮಾಡು; ಇದ್ದಡೆ= ಇದ್ದರೆ; ಇಲ್ಲದಿದ್ದಡೆ=ಇಲ್ಲದಿದ್ದರೆ/ಇಲ್ಲದೇ ಹೋದರೆ; ಗುಣ+ಇಲ್ಲದೆ+ಇದ್ದಡೆ; ಗುಣ=ಒಳ್ಳೆಯತನ/ಸಜ್ಜನಿಕೆ/ನಡತೆ; ಒಂದು ಗುಣ=ಬಳಿ ಬಂದವರ ಮನಸ್ಸನ್ನು ನೋಯಿಸದೆ/ಅವರನ್ನು ಕಡೆಗಣಿಸದೆ, ಅವರನ್ನು ಒಲವು, ನಲಿವು, ಕರುಣೆಯಿಂದ ಕಂಡು ಮಾತನಾಡಿಸುವ ಗುಣ;

ಮೂಗು=ಉಸಿರಾಡಲು ಬಳಸುವ ಮತ್ತು ವಾಸನೆಯನ್ನು ಗ್ರಹಿಸುವ ಅಂಗ; ಮೂಗ=ಮೂಗನ್ನು; ಕೊಯ್=ಕತ್ತರಿಸು/ಸೀಳು; ಕೊಯ್ವುದ=ಕೊಯ್ಯುವುದನ್ನು/

ಕತ್ತರಿಸುವುದನ್ನು; ಮೂಗ ಕೊಯ್ವುದ=ಮೂಗು ಕೊಯ್ಯುವುದನ್ನು; ಮಾಣ್=ಬಿಡು/ತ್ಯಜಿಸು; ಮಾಣ್ಬನೆ>ಮಾಬನೆ; ಮಾಬನೆ=ಮಾಡದೆ ಬಿಡುತ್ತಾನೆಯೇ; ಮೂಗ ಕೊಯ್ವುದ ಮಾಬನೆ=ಮೂಗನ್ನು ತುಂಡರಿಸದೆ/ಕತ್ತರಿಸದೆ ಬಿಡುತ್ತಾನೆಯೇ; ಮೂಗು ಕೊಯ್ಯುವುದು=ಇದು ಒಂದು ನುಡಿಗಟ್ಟು. ವ್ಯಕ್ತಿಯನ್ನು ಅಪಮಾನಗೊಳಿಸುವುದು/ವ್ಯಕ್ತಿಯ ನಡೆನುಡಿಯಲ್ಲಿರುವ ಸೊಕ್ಕು/ಮದ/ಅಹಂಕಾರವನ್ನು ಅಡಗಿಸುವುದು ಎಂಬ ತಿರುಳಿನಲ್ಲಿ ಬಳಕೆಯಾಗಿದೆ;

ಕೂಡಲಸಂಗಮದೇವ+ಅಯ್ಯ; ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತನಾಮ;

ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದಡೆ ಮೂಗ ಕೊಯ್ವುದ ಮಾಬನೆ ಕೂಡಲಸಂಗಮದೇವಯ್ಯ=ಕೊಡುವುದಕ್ಕೆ ನಿಮಗೆ ಮನಸ್ಸಿಲ್ಲದಿದ್ದರೂ/ನಿಮ್ಮ ಕಯ್ಯಲ್ಲಿ ಆಗದಿದ್ದರೂ/ಅವರ ಸಂಕಟವನ್ನು ನಿಮ್ಮಿಂದ ನಿವಾರಿಸಲಾಗದಿದ್ದರೂ, ಬಳಿ ಬಂದವರನ್ನು ಒಲವು ನಲಿವಿನಿಂದ/ಕರುಣೆಯಿಂದ ಕಾಣುವ ಮತ್ತು ಮಾತನಾಡಿಸುವ ಗುಣವನ್ನು ಹೊಂದಿರಬೇಕು. ಬೇಡಿ ಬಂದವರನ್ನು/ನೆರವು ಕೋರಿ ಬಂದವರನ್ನು ಅಹಂಕಾರದಿಂದ ಕಡೆಗಣಿಸುವ ವ್ಯಕ್ತಿಗಳನ್ನು ಕೂಡಲಸಂಗಮದೇವನು ದಂಡಿಸುತ್ತಾನೆ.

"ಸಹಮಾನವರ ಬಗ್ಗೆ ಒಲವು/ಕರುಣೆ ಇಲ್ಲದಿದ್ದರೆ, ಅಂತಹವರಿಗೆ ಶಿವನು ಒಲಿಯುವುದಿಲ್ಲ" ಎಂಬ ಶಿವಶರಣಶರಣೆಯರ ನಿಲುವನ್ನು ಈ ನುಡಿಗಳು ಸೂಚಿಸುತ್ತವೆ.



೬)   ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ
ಧರೆ ಹತ್ತಿ ಉರಿದಡೆ ನಿಲಲುಬಾರದು

ಏರಿ ನೀರುಂಬಡೆ
ಬೇಲಿ ಕೆಯ್ಯ ಮೇವಡೆ

ನಾರಿ ತನ್ನ ಮನೆಯಲ್ಲಿ ಕಳುವಡೆ
ತಾಯ ಮೊಲೆವಾಲು ನಂಜಾಗಿ ಕೊಲುವಡೆ

ಇನ್ನಾರಿಗೆ ದೂರುವೆ
ಕೂಡಲಸಂಗಮದೇವಾ.

**ವ್ಯಕ್ತಿಯು ತಾನು ಕಾಪಾಡಬೇಕಾಗಿರುವುದನ್ನು ತಾನೇ ಹಾಳುಮಾಡಲು ತೊಡಗಿದಾಗ, ಅದನ್ನು ತಡೆಗಟ್ಟಲು ಯಾರಿಂದಲೂ ಆಗುವುದಿಲ್ಲವೆಂಬ ಸಂಗತಿಯನ್ನು ರೂಪಕಗಳ ಮೂಲಕ ಈ ವಚನದಲ್ಲಿ ಹೇಳಲಾಗಿದೆ.**

(ಒಲೆ=ಅಡುಗೆಯನ್ನು ಮಾಡಲು/ನೀರನ್ನು ಕಾಯಿಸಲು/ವಸ್ತುಗಳನ್ನು ಬೇಯಿಸಲು ಬೇಕಾದ ಬೆಂಕಿಯನ್ನು ಉರಿಸಲು ಕಟ್ಟಿರುವ ಗೂಡು/ಉಪಕರಣ/ಸಲಕರಣೆ; ಹತ್ತು=ಬೆಂಕಿಯು ಹೊತ್ತಿಕೊಳ್ಳುವುದು/ಬೆಂಕಿಯ ಜಳ ಹರಡಿಕೊಳ್ಳುವುದು; ಉರಿ= ಬೆಂಕಿಯ ತಾಪ/ಸುಡುವಿಕೆ; ಉರಿದಡೆ=ಉರಿದಾಗ/ದಗದಗನೆ ಉರಿಯತೊಡಗಿದರೆ/ ಬೆಂಕಿಯ ಕೆನ್ನಾಲಿಗೆಯು ಹರಡಿಕೊಂಡರೆ; ನಿಲಬಹುದು+ಅಲ್ಲದೆ; ನಿಲ್= ನಿಂತುಕೊಳ್ಳುವುದು; ಬಹುದು=ಆಗುವುದು; ಅಲ್ಲದೆ=ಅದನ್ನು ಬಿಟ್ಟು/ಹೊರತುಪಡಿಸಿ; ಧರೆ='ಭೂಮಿ'/ಇಹಲೋಕ/ಜಗತ್ತು; ನಿಲಲು=ನಿಂತುಕೊಳ್ಳಲು; ಬಾರದು=ಆಗುವುದಿಲ್ಲ;

ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ ಧರೆ ಹತ್ತಿ ಉರಿದಡೆ ನಿಲಲುಬಾರದು =ಒಲೆಯಲ್ಲಿ ಉರಿಯುತ್ತಿದ್ದ ಬೆಂಕಿಯು ಇದ್ದಕ್ಕಿದ್ದಂತೆಯೇ 'ದಗ್' ಎಂದು ಹತ್ತಿಕೊಂಡು, ಉರಿಯ ಕೆನ್ನಾಲಿಗೆಯನ್ನು ಚಾಚುತ್ತ ಸುತ್ತಮುತ್ತ ಹಬ್ಬಲು ತೊಡಗಿದಾಗ, ಒಲೆಯ

ಬೆಂಕಿಯ ಜಳದಿಂದ ದೂರ ಸರಿದು ನಿಂತು ಪಾರಾಗಬಹುದು. ಆದರೆ ಇಡೀ 'ಭೂಮಂಡಲ'ವೆಲ್ಲವೂ ಹತ್ತಿಕೊಂಡು ಉರಿಯತೊಡಗಿದಾಗ, ಬೆಂಕಿಯ ತಾಪದಿಂದ ಪಾರಾಗಿ ನಿಲ್ಲಲು ಯಾವೊಂದು ಎಡೆಯೂ ಇರುವುದಿಲ್ಲ. ಅಂದರೆ ಬೆಂಕಿಯ ತಾಪದಿಂದ ಸುಟ್ಟು ಕರಕಲಾಗಬೇಕಾಗುತ್ತದೆ;

ಏರಿ=ನದಿ/ಹೊಳೆ/ತೊರೆಗಳಲ್ಲಿ ಹರಿದು ಹೋಗುತ್ತಿರುವ ನೀರನ್ನು ಒಂದೆಡೆ ಕೂಡಿ ಹಾಕಲೆಂದು/ಸಂಗ್ರಹಿಸಲೆಂದು ಕಟ್ಟಿರುವ ಅಣೆ/ಕಟ್ಟೆ; ನೀರ್+ಉಂಬಡೆ; ಉಣ್=ಕುಡಿ/ಹೀರು; ಉಂಬಡೆ=ಹೀರಿಕೊಂಡರೆ/ಕುಡಿದರೆ;

ಏರಿ ನೀರುಂಬಡೆ=ಬೇಸಾಯಕ್ಕೆ ಬಳಸಲೆಂದು/ಕುಡಿಯುವ ನೀರಿನ ಅಗತ್ಯವನ್ನು ಪೂರಯಿಸಿಕೊಳ್ಳುವುದಕ್ಕಾಗಿ ಹರಿಯುತ್ತಿದ್ದ ನೀರನ್ನು ಒಂದಡೆ ನಿಲ್ಲಿಸಲೆಂದು ಕಟ್ಟಿರುವ ಏರಿಯೇ ನೀರೆಲ್ಲವನ್ನೂ ಹೀರಿಕೊಂಡರೆ;

ಬೇಲಿ=ಹೊಲ/ಗದ್ದೆ/ತೋಟದಲ್ಲಿ ಒಡ್ಡಿರುವ ಬೆಳೆಯನ್ನು ಕಾಪಾಡಿಕೊಳ್ಳುವುದಕ್ಕಾಗಿ ಜಮೀನಿನ ಸುತ್ತಲೂ ಹಾಕಿರುವ ಮುಳ್ಳಿನ ಗಿಡಗಳ ಪೊದೆ/ಲೋಹದ ತಂತಿಯ ಆವರಣ/ಎಲ್ಲೆಕಟ್ಟು; ಕೆಯ್=ಹೊಲ/ಗದ್ದೆ/ತೋಟ/ಜಮೀನು; ಕೆಯ್ಯ=ಹೊಲ/ಗದ್ದೆ/ತೋಟದಲ್ಲಿರುವ ಬೆಳೆಯನ್ನು; ಮೇ/ಮೆಯ್=ತಿನ್ನು/ಕಬಳಿಸು; ಮೇವಡೆ=ತಿಂದರೆ/ಕಬಳಿಸಿದರೆ;

ಬೇಲಿ ಕೆಯ್ಯ ಮೇವಡೆ=ಬೆಳೆಯನ್ನು ಬೇಲಿಯೇ ತಿಂದುಕೊಂಡರೆ/ಮೇಯ ತೊಡಗಿದರೆ;

ನಾರಿ=ಹೆಣ್ಣು/ಹೆಂಗಸು; ತನ್ನ=ತನಗೆ ಸೇರಿದ; ಮನೆ+ಅಲ್ಲಿ; ಮನೆ=ವಾಸದ ನೆಲೆ; ಕಳ್=ಒಡವೆ ವಸ್ತುಗಳನ್ನು ಅಪಹರಿಸುವುದು/ದೋಚುವುದು/ಎತ್ತಿಕೊಳ್ಳುವುದು/ಎಗರಿಸುವುದು; ಕಳುವಡೆ=ಕದ್ದರೆ/ಕಳವು ಮಾಡಲು ತೊಡಗಿದರೆ;

ನಾರಿ ತನ್ನ ಮನೆಯಲ್ಲಿ ಕಳುವಡೆ=ಮನೆಯೊಡತಿಯು ತನ್ನ ಮನೆಯ ಒಡವೆ ವಸ್ತುಗಳನ್ನು ತಾನೇ ಕದ್ದರೆ;

ತಾಯ್=ಮಗುವನ್ನು ಹಡೆದವಳು; ಮೊಲೆ+ಪಾಲು; ಮೊಲೆ=ಎದೆ/ಕುಚ; ಪಾಲು=ಹಾಲು; ನಂಜು+ಆಗಿ; ನಂಜು=ಸೇವಿಸಿದವರಿಗೆ ಸಾವನ್ನುಂಟು ಮಾಡುವ ವಸ್ತು/ಗರಳ/'ವಿಷ'; ಕೊಲ್=ಜೀವ ತೆಗೆ/ಸಾಯಿಸು; ಕೊಲುವಡೆ=ಸಾಯಿಸಿದರೆ/ಜೀವ ತೆಗೆದರೆ;

ತಾಯ ಮೊಲೆವಾಲು ನಂಜಾಗಿ ಕೊಲುವಡೆ=ಹೆತ್ತ ತಾಯಿಯ ಎದೆ ಹಾಲು ಮಗುವಿನ ಪಾಲಿಗೆ ನಂಜಾಗಿ, ಮಗುವಿನ ಸಾವಿಗೆ ಕಾರಣವಾದರೆ;

ಇನ್ನು+ಆರಿಗೆ; ಇನ್ನು=ಮತ್ತೆ/ಬೇರೆ; ಆರ್=ಯಾರು/ಯಾವ ವ್ಯಕ್ತಿ; ಆರಿಗೆ=ಯಾರಿಗೆ/ಯಾವ ವ್ಯಕ್ತಿಗೆ; ದೂರು=ವ್ಯಕ್ತಿಯ ಸಂಕಟಕ್ಕೆ/ಸಾವಿಗೆ ಕಾರಣರಾದವರ ಮೇಲೆ ಆಪಾದನೆಯನ್ನು ಹೊರಿಸುವುದು/ಇತರರಿಂದ ಒದಗಿ ಬಂದಿರುವ ಆಪತ್ತಿನಿಂದ ಪಾರುಮಾಡುವಂತೆ ಆಡಳಿತದ ಹೊಣೆಹೊತ್ತವರಿಗೆ ಮೊರೆಯಿಡುವುದು;

ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು/ ಬಸವಣ್ಣನ ವಚನಗಳ ಅಂಕಿತನಾಮ;

ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ=ಯಾರ ಮುಂದೆ ನನ್ನ ಸಂಕಟವನ್ನು ಹೇಳಿಕೊಳ್ಳಲಿ.

ಇಡೀ ಜಗತ್ತಿಗೆ ಬೆಂಕಿಯು ಹರಡಿಕೊಂಡು ಉರಿಯತೊಡಗುವ--ಏರಿಯೇ ಕೆರೆಯ ನೀರೆಲ್ಲವನ್ನೂ ಹೀರಿಕೊಳ್ಳುವ--ಬೇಲಿಯೇ ಬೆಳೆಯೆಲ್ಲವನ್ನೂ ಮೇಯುವ--ಮನೆಯೊಡತಿಯೇ ತನ್ನ ಮನೆಯ ಒಡವೆ ವಸ್ತುಗಳನ್ನು ಕದಿಯುವ--ತಾಯಿಯ ಎದೆಹಾಲೇ ಮಗುವಿನ ಸಾವಿಗೆ ಕಾರಣವಾಗುವ--ಈ ಅಯ್ದು ರೂಪಕಗಳ ಮೂಲಕ ವಚನಕಾರನು ಸಾಮಾಜಿಕ ಒಕ್ಕೂಟಗಳ ನಡುವೆ ಸಿಲುಕಿ ತೊಳಲಾಡುವ ವ್ಯಕ್ತಿಯ ಮೂಕವೇದನೆಯನ್ನು ಚಿತ್ರಿಸಿದ್ದಾನೆ.

ಜನಸಮುದಾಯದ ಒಳಿತಿಗೆಂದು ಮಾನವರೇ ಕಟ್ಟಿಕೊಂಡಿರುವ ಜಾತಿ/ಮತ/ಕುಟುಂಬ/ವಿದ್ಯೆ/ಆರೋಗ್ಯ/ನ್ಯಾಯ/ಆಡಳಿತದ ನೆಲೆಗಳನ್ನು ಸಾಮಾಜಿಕ ಒಕ್ಕೂಟಗಳೆಂದು ಕರೆಯುತ್ತಾರೆ. ಇವನ್ನು ಮುನ್ನಡೆಸುವ ಹೊಣೆಗಾರಿಕೆಯನ್ನು ಹೊತ್ತಿರುವ/ಒಕ್ಕೂಟಗಳ ಗದ್ದುಗೆಯಲ್ಲಿರುವ ವ್ಯಕ್ತಿಗಳು ನೀಚರಾಗಿ/ಕ್ರೂರಿಗಳಾಗಿ/ವಂಚಕರಾಗಿ ನಡೆದುಕೊಳ್ಳತೊಡಗಿದಾಗ ವ್ಯಕ್ತಿಯ/ಜನಸಮುದಾಯದ ಬದುಕು ನೂರೆಂಟು ಬಗೆಯ ಸಂಕಟಗಳಿಗೆ ಗುರಿಯಾಗಿ ನರಳತೊಡಗುತ್ತದೆ ಎಂಬುದನ್ನು ಈ ರೂಪಕಗಳು ಸೂಚಿಸುತ್ತಿವೆ.

ಓದುಗರಿಗೆ/ಕೇಳುಗರಿಗೆ ಚೆನ್ನಾಗಿ ಮನದಟ್ಟಾಗುವಂತೆ ತಿಳಿಸಬೇಕೆಂಬ ಉದ್ದೇಶದಿಂದ ಕವಿಯು ತಾನು ಹೇಳಬೇಕಾದ ಸಂಗತಿಯನ್ನು ಮತ್ತೊಂದು ಸಂಗತಿಯೊಡನೆ ಜತೆಗೂಡಿಸಿ ಬಣ್ಣಿಸುವ ನುಡಿರಚನೆಯನ್ನು "ರೂಪಕ/ಶಬ್ದಚಿತ್ರ" ಎಂದು ಕರೆಯುತ್ತಾರೆ.



೭)	ಕಲ್ಲ ನಾಗರ ಕಂಡಡೆ
ಹಾಲನೆರೆಯೆಂಬರು
ದಿಟದ ನಾಗರ ಕಂಡಡೆ
ಕೊಲ್ಲೆಂಬರಯ್ಯ

ಉಂಬ ಜಂಗಮ ಬಂದಡೆ
ನಡೆಯೆಂಬರು
ಉಣ್ಣದ ಲಿಂಗಕ್ಕೆ
ಬೋನವ ಹಿಡಿಯೆಂಬರಯ್ಯ

ನಮ್ಮ ಕೂಡಲಸಂಗನ ಶರಣರ ಕಂಡು
ಉದಾಸೀನವ ಮಾಡಿದಡೆ
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ

ಜನರು ತಮ್ಮ ನಿತ್ಯ ಜೀವನದಲ್ಲಿ ನಂಬಿಕೆ ಮತ್ತು ವಾಸ್ತವದ ನಡುವೆ ತೊಳಲಾಡುವಾಗ, ಅವರಲ್ಲಿ ಕಂಡು ಬರುವ ಇಬ್ಬಗೆಯ ನಡೆನುಡಿಗಳನ್ನು ಈ ವಚನದಲ್ಲಿ ಹೇಳಲಾಗಿದೆ.

'ನಂಬಿಕೆ' ಎಂದರೆ ಜನರು ಕಲ್ಪಿಸಿಕೊಂಡಿರುವ ಸಂಗತಿಗಳು ಮತ್ತು ಮಾಡುತ್ತಿರುವ ಆಚರಣೆಗಳು.

'ವಾಸ್ತವ' ಎಂದರೆ ನಿಸರ್ಗದಲ್ಲಿರುವ ಎಲ್ಲಾ ಬಗೆಯ ವಸ್ತುಗಳು ಮತ್ತು ಜೀವರಾಶಿಗಳು.

(ಕಲ್ಲು=ಬಂಡೆ/ಅರೆ/ಶಿಲೆ; ನಾಗರು=ನಾಗರ ಹಾವು/ನಾಗಸರ್ಪ; ಕಲ್ಲ ನಾಗರ= ಕಲ್ಲಿನಿಂದ ಮಾಡಿರುವ ನಾಗರ ಹಾವಿನ ವಿಗ್ರಹ/ಪ್ರತಿಮೆ/ಮೂರ್ತಿಯನ್ನು; ಕಾಣ್= ನೋಡು; ಕಂಡಡೆ=ನೋಡಿದರೆ; ಹಾಲ್+ಅನ್+ಎರೆ+ಎಂಬರು; ಹಾಲ್=ಹಾಲು; ಅನ್=ಅನ್ನು; ಎರೆ=ಸುರಿ/ಹೊಯ್ಯು/ಹಾಕು; ಎನ್=ಹೇಳು/ನುಡಿ; ಎಂಬರು=ಎನ್ನುವರು/ ಎಂದು ಹೇಳುವರು;

ದಿಟ=ನಿಜ/ಸತ್ಯ/ವಾಸ್ತವ; ದಿಟದ ನಾಗರ=ಜೀವಂತವಾಗಿರುವ ನಾಗರಹಾವನ್ನು; ಕೊಲ್+ಎಂಬರ್+ಅಯ್ಯ; ಕೊಲ್=ಜೀವ ತೆಗೆ/ಪ್ರಾಣ ತೆಗೆ/ಸಾಯಿಸು; ಅಯ್ಯ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ;

ಕಲ್ಲ ನಾಗರ ಕಂಡಡೆ ಹಾಲನೆರೆಯೆಂಬರು ದಿಟದ ನಾಗರ ಕಂಡಡೆ ಕೊಲ್ಲೆಂಬರಯ್ಯ=ನಾಗರಹಾವು ಜನಸಮುದಾಯದ ಮನದ ಕಲ್ಪನೆಯಲ್ಲಿ ನಾಗದೇವತೆಯಾಗಿ ನೆಲೆಗೊಂಡಿದೆ. ಜೀವಂತವಾಗಿರುವ ನಾಗರಹಾವನ್ನು ಹೊಡೆದು ಕೊಂದರೆ ಇಲ್ಲವೇ ಅದಕ್ಕೆ ಪೆಟ್ಟನ್ನು ಮಾಡಿ ನೋಯಿಸಿದರೆ, ಹಾಗೆ ಮಾಡಿದ ವ್ಯಕ್ತಿ ಇಲ್ಲವೇ ಅವನ ಕುಟುಂಬದವರು ಜೀವನದಲ್ಲಿ ತೊಗಲಿನ/ಚರ್ಮದ ರೋಗಗಳಿಂದ ಮತ್ತು ಹೆಂಗಸರು ಬಂಜೆತನದಿಂದ ನರಳಬೇಕಾಗುತ್ತದೆ ಎಂಬ ಹೆದರಿಕೆಯು ಜನಮನದಲ್ಲಿದೆ. ಆದುದರಿಂದ ನಾಗದೇವತೆಯ ಪ್ರತಿರೂಪದಂತಿರುವ ಕಲ್ಲ ನಾಗರಕ್ಕೆ ಹಾಲನ್ನು ಎರೆದು ಪೂಜಿಸುತ್ತಾರೆ. ಈ ಬಗೆಯ ಆಚರಣೆಯಿಂದ ತೊಗಲಿನ ಕಾಯಿಲೆಗಳು ಗುಣವಾಗುವುದೆಂಬ/ಬಂಜೆತನ ನಿವಾರಣೆಯಾಗುವುದೆಂಬ/ವ್ಯಕ್ತಿಯ ಜೀವನದಲ್ಲಿ ಒಳಿತು ಉಂಟಾಗುವುದೆಂಬ ನಂಬಿಕೆಯು ಜನಮನದಲ್ಲಿದೆ. ಈ ನೆಲೆಯಲ್ಲಿ ಕಲ್ಲ ನಾಗರದ ಪೂಜೆಯು ಜನಸಮುದಾಯದ 'ನಂಬಿಕೆಯ ಜಗತ್ತನ್ನು' ಸೂಚಿಸುತ್ತದೆ.

ಜೀವಂತವಾಗಿರುವ ನಾಗರ ಹಾವು ಜನರ ಮುಂದೆ ಕಾಣಿಸಿಕೊಂಡಾಗ, ಅದು ಒಂದು ವೇಳೆ ಕಚ್ಚಿದರೆ, ಅದರ ನಂಜಿನಿಂದ ಸಾವು ಉಂಟಾಗುವುದೆಂಬ ಹೆದರಿಕೆಯಿಂದ ತತ್ತರಿಸುತ್ತ/ನಡುಗುತ್ತ ನಾಗರಹಾವನ್ನು 'ಕೊಲ್ಲಿ/ಹೊಡಿಯಿರಿ/ಹೊಡೆದು ಸಾಯಿಸಿ' ಎಂದು ಜನರು ಅರಚುತ್ತಾರೆ. ಈ ನೆಲೆಯಲ್ಲಿ ಜನರ ಅರಚುವಿಕೆಯು 'ವಾಸ್ತವ ಜಗತ್ತನ್ನು' ಸೂಚಿಸುತ್ತದೆ. ಏಕೆಂದರೆ ನಾಗರ ನಂಜಿನಿಂದ ಸಾವು ನಿಶ್ಚಿತ. ವಾಸ್ತವ ಜಗತ್ತು ಎಂದರೆ ನಾವು ಬಾಳುತ್ತಿರುವ ಈ ಜಗತ್ತು/ ಈ 'ಭೂ' ಮಂಡಲ.

ನಿಸರ್ಗದ ವಸ್ತು ಮತ್ತು ಜೀವಿಗಳಿಂದ ತುಂಬಿರುವ 'ವಾಸ್ತವ ಜಗತ್ತು' ಮತ್ತು ಜನರು ತಾವಾಗಿಯೇ ಕಲ್ಪಿಸಿಕೊಂಡು ಆಚರಿಸುತ್ತಿರುವ 'ನಂಬಿಕೆಯ ಜಗತ್ತು' – ಎಂಬ ಎರಡು ಜಗತ್ತುಗಳ ನಡುವೆ ಬಾಳುತ್ತಿರುವುದರಿಂದ, ಇಂತಹ ಇಬ್ಬಗೆಯ ನಡೆನುಡಿಗಳು ಜನರ ಬದುಕಿನಲ್ಲಿ ಸಹಜವಾಗಿ ಕಂಡುಬರುತ್ತವೆ.

ಉಣ್=ತಿನ್ನು/ಮೆಲ್ಲು/ಸೇವಿಸು; ಉಂಬ=ಊಟ ಮಾಡುವ; ಜಂಗಮ=ವ್ಯಕ್ತಿಗೆ/ಸಹಮಾನವರಿಗೆ/ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ನಡೆನುಡಿಗಳನ್ನು ಜನರಿಗೆ ತಿಳಿಯ ಹೇಳುತ್ತಾ, ಒಂದೆಡೆಯಿಂದ ಮತ್ತೊಂದೆಡೆಗೆ ನಿರಂತರವಾಗಿ ಸಂಚರಿಸುತ್ತಿರುವ ಶಿವಶರಣ; ಬಂದಡೆ=ಬಂದರೆ; ನಡೆ+ಎಂಬರು; ನಡೆ=ಮುಂದಕ್ಕೆ

ಹೋಗು; ಉಣ್ಣದ=ತಿನ್ನದ/ಮೆಲ್ಲದ/ಸೇವಿಸಿದ; ಲಿಂಗ=ಶಿವ/ಈಶ್ವರನ ಸಂಕೇತವಾದ ವಿಗ್ರಹ/ಪ್ರತಿಮೆ/ಮೂರ್ತಿ; ಬೋನ=ಅನ್ನ/ಆಹಾರ/ತಿನಸು/ಉಣಿಸು; ಹಿಡಿ+ ಎಂಬರ್+ಅಯ್ಯಾ; ಹಿಡಿ=ಮುಂದೆ ಇಡು/ನೀಡು;

ಉಂಬ ಜಂಗಮ ಬಂದಡೆ ನಡೆಯೆಂಬರಯ್ಯ ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ=ಉಣಿಸು ತಿನಸುಗಳನ್ನು ಪಡೆದು ಹಸಿವನ್ನು ನೀಗಿಸಿಕೊಳ್ಳಲೆಂದು ತಮ್ಮ ಮನೆಯ ಬಳಿಗೆ ಬರುವ ಜಂಗಮನಿಗೆ ಉಣಲಿಕ್ಕದೆ, ಜನರು ಅವನನ್ನು ಹೊರಹಾಕುವರು/ 'ಮುಂದಕ್ಕೆ ಹೋಗು' ಎಂದು ಹೇಳಿ ಸಾಗಹಾಕುವರು.

ಆದರೆ ಕಲ್ಲು/ಮಣ್ಣು/ಮರ/ಲೋಹದಿಂದ ಮಾಡಿರುವ ವಿಗ್ರಹರೂಪದ ಲಿಂಗದ ಮುಂದೆ ಉಣಿಸು ತಿನಸುಗಳನ್ನು ಜನರು ಎಡೆಯಾಗಿ ನೀಡುವರು/ಇಡುವರು. ಏಕೆಂದರೆ ಜೀವಂತ ಜಂಗಮನಿಗಿಂತ ಜಡರೂಪಿಯಾದ ದೇವರೇ ಜನರ ಪಾಲಿಗೆ ದೊಡ್ಡವನಾಗಿರುತ್ತಾನೆ. ಸಹಮಾನವರ ಹಸಿವು/ಬಡತನ/ಸಂಕಟವನ್ನು ಕಡೆಗಣಿಸಿ ದೇವರನ್ನು ದೊಡ್ಡದಾಗಿ ಮೆರೆಸುವ ಜನರ ನಿಲುವನ್ನು ವಚನಕಾರನು ಈ ಬಗೆಯ ನಡೆನುಡಿಗಳಲ್ಲಿ ಗುರುತಿಸಿದ್ದಾನೆ.

ಕೂಡಲಸಂಗ=ಬಸವಣ್ಣನ ಮೆಚ್ಚಿನ ದೇವರು; ಶರಣ=ಒಳ್ಳೆಯ ನಡೆನುಡಿಗಳಿಂದ ಶಿವನನ್ನು ಪೂಜಿಸುವವನು; ಉದಾಸೀನ=ಅಸಡ್ಡೆ/ತಿರಸ್ಕಾರ/ಕಡೆಗಣಿಸುವಿಕೆ; ಮಾಡಿದಡೆ=ಮಾಡಿದರೆ; ಕಲ್ಲ=ಕಲ್ಲನ್ನು/ಬಂಡೆಯನ್ನು/ಶಿಲೆಯನ್ನು; ತಾಗು=ಅಪ್ಪಳಿಸು/ ಡಿಕ್ಕಿ ಹೊಡೆ/ಮೇಲೆ ಬೀಳು; ಮಿಟ್ಟೆ+ಅಂತೆ+ಅಪ್ಪರ್+ಅಯ್ಯ; ಮಿಟ್ಟೆ=ಮಣ್ಣಿನ ಉಂಡೆ/ ಹೆಂಟೆ; ಕಲ್ಲ ತಾಗಿದ ಮಿಟ್ಟೆ=ಕಲ್ಲಿಗೆ ಬಡಿದ ಮಣ್ಣಿನ ಉಂಡೆಯು ಪುಡಿಪುಡಿಯಾಗುತ್ತದೆ; ಅಂತೆ=ಹಾಗೆ/ಆ ರೀತಿ; ಅಪ್ಪರ್=ಆಗುವರು/ಆಗುತ್ತಾರೆ;

ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ=ಒಳ್ಳೆಯ ನಡೆನುಡಿಗಳನ್ನೇ ದೇವರೆಂದು ತಿಳಿದು, ಸಹಮಾನವರ ಮತ್ತು ಸಮಾಜದ ಒಳಿತಿಗಾಗಿ ಬಾಳುತ್ತಿರುವ ಶಿವಶರಣರನ್ನು ಕಡೆಗಣಿಸುವ/ ಅಪಮಾನಿಸುವ ವ್ಯಕ್ತಿಗಳು ಸಂಕಟಕ್ಕೆ ಗುರಿಯಾಗುತ್ತಾರೆ ಎಂಬ ಎಚ್ಚರಿಕೆಯ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ.)



೮)　ಕಳಬೇಡ ಕೊಲಬೇಡ
ಹುಸಿಯ ನುಡಿಯಲು ಬೇಡ
ಮುನಿಯ ಬೇಡ
ಅನ್ಯರಿಗೆ ಅಸಹ್ಯಬಡಬೇಡ
ತನ್ನ ಬಣ್ಣಿಸಬೇಡ
ಇದಿರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ
ಇದೇ ಬಹಿರಂಗ ಶುದ್ಧಿ
ನಮ್ಮ ಕೂಡಲಸಂಗನದೇವರನೊಲಿಸುವ ಪರಿ.

**ನಿತ್ಯದ ಬದುಕಿನಲ್ಲಿ ಮಾನವ ಸಮುದಾಯವು ಒಲವು ನಲಿವು ನೆಮ್ಮದಿಯಿಂದ ಜತೆಗೂಡಿ ಬಾಳಬೇಕಾದರೆ ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಇರಬೇಕಾದ ಒಳ್ಳೆಯ ನಡೆನುಡಿಗಳನ್ನು ಈ ವಚನದಲ್ಲಿ ಹೇಳಲಾಗಿದೆ.**

(ಕಳ್=ಎಗರಿಸು/ದೋಚು/ಅಪಹರಿಸು/ಲಪಟಾಯಿಸು; ಬೇಡ=ಬೇಕಾಗಿಲ್ಲ/ಸಲ್ಲದು; ಕಳಬೇಡ=ಕಳ್ಳತನವನ್ನು ಮಾಡಬೇಡ/ಇತರರ ಒಡವೆ ವಸ್ತು/ಆಸ್ತಿಪಾಸ್ತಿ/ಹಣಕಾಸನ್ನು ಕದಿಯಬೇಡ; ಕೊಲ್=ಜೀವ ತೆಗೆ/ಸಾಯಿಸು/ಪ್ರಾಣ ತೆಗೆ; ಕೊಲಬೇಡ=ಜೀವಿಗಳನ್ನು ಕೊಲ್ಲಬೇಡ/ಹಿಂಸಿಸಬೇಡ;

ಹುಸಿ=ಸುಳ್ಳು/ಸಟೆ/ಇಲ್ಲದ್ದನ್ನು ಇದೆಯೆಂದು ಹೇಳುವುದು–ಇರುವುದನ್ನು ಇಲ್ಲವೆಂದು ಹೇಳುವುದು; ನುಡಿ=ಮಾತು/ಸೊಲ್ಲು; ಹುಸಿಯ ನುಡಿಯಲು ಬೇಡ=ಸುಳ್ಳನ್ನು ಆಡಬೇಡ;

ಮುನಿ=ಸಿಟ್ಟಾಗು/ಕೋಪಗೊಳ್ಳು/ಆಕ್ರೋಶಪಡು; ಮುನಿಯ ಬೇಡ=ಕೋಪದಿಂದ ಕೆರಳಬೇಡ;

ಅನ್ಯ=ಬೇರೆಯ/ಮತ್ತೊಂದು/ಮತ್ತೊಬ್ಬ; ಅನ್ಯರು=ಇತರರು/ಬೇರೆಯವರು; ಅಸಹ್ಯ+ಪಡಬೇಡ; ಅಸಹ್ಯ=ತಿರಸ್ಕಾರ/ಕಡೆಗಣನೆ/ಕೀಳಾಗಿ ಕಾಣುವುದು;

ಪಡು=ಹೊಂದು/ತಾಳು/ತಳೆ; ಪಡಬೇಡ=ತಳೆಯಬೇಡ/ಹೊಂದಬೇಡ; ಅನ್ಯರಿಗೆ ಅಸಹ್ಯಬಡಬೇಡ=ಇತರರನ್ನು/ಬೇರೆಯವರನ್ನು ಕೀಳಾಗಿ ಕಾಣಬೇಡ ಮತ್ತು ನಡೆಸಿಕೊಳ್ಳಬೇಡ;

ತನ್ನ=ನಿನ್ನನ್ನು ನೀನು; ಬಣ್ಣನೆ=ಹೊಗಳಿಕೆ/ಸ್ತುತಿ; ತನ್ನ ಬಣ್ಣಿಸಬೇಡ=ನಿನ್ನ ನಡೆನುಡಿಗಳನ್ನೇ ದೊಡ್ಡದಾಗಿ ಹೇಳಿಕೊಂಡು, ಎಲ್ಲರಿಗಿಂತ ನೀನೇ ಮೇಲು ಎಂದು ಹೊಗಳಿಕೊಳ್ಳಬೇಡ;

ಇದಿರ=ನಿನ್ನ ಮುಂದಿರುವವರನ್ನು/ನಿನ್ನ ಜತೆ ಒಡನಾಡುವವರನ್ನು/ ವ್ಯವಹರಿಸುವವರನ್ನು; ಹಳಿ=ನಿಂದಿಸು/ತೆಗಳು/ಬಯ್ಯುವುದು; ಇದಿರ ಹಳಿಯಲು ಬೇಡ=ನಿನ್ನ ಜತೆ ಒಡನಾಡುವವರನ್ನು/ ವ್ಯವಹರಿಸುವವರನ್ನು ಕಡೆಗಣಿಸಿ ನಿಂದಿಸಬೇಡ/ ಬಯ್ಯಬೇಡ;

ಇದೇ=ಈ ಬಗೆಯ ನಡೆನುಡಿಗಳೇ/ಈ ರೀತಿಯ ನಡವಳಿಕೆಯೇ; ಅಂತರಂಗ= ಮನಸ್ಸು; ಶುದ್ಧಿ=ಚೊಕ್ಕಟವಾಗಿರುವುದು/ಶುಚಿಯಾಗಿರುವುದು; ಅಂತರಂಗ ಶುದ್ಧಿ=ಮನಸ್ಸನ್ನು ಚೊಕ್ಕಟವಾಗಿ ಇಟ್ಟುಕೊಂಡಿರುವುದು ಎಂದರೆ ಮನದಲ್ಲಿ ಮೂಡುವ ಕೆಟ್ಟ ಸಂಗತಿ/ವಿಚಾರಗಳನ್ನು ನಿವಾರಿಸಿಕೊಂಡು, ಒಳ್ಳೆಯ ಸಂಗತಿ/ವಿಚಾರಗಳನ್ನು ಎಚ್ಚರದಿಂದ ಕಾಪಾಡಿಕೊಳ್ಳುವುದು/ಮನದಲ್ಲಿ ಒಳ್ಳೆಯ ಅರಿವನ್ನು ಹೊಂದಿರುವುದು;

ಬಹಿರಂಗ=ಹೊರಗಡೆ/ಹೊರಗಿನದು; ಬಹಿರಂಗ ಶುದ್ಧಿ=ವ್ಯಕ್ತಿಯು ಸಾಮಾಜಿಕವಾಗಿ ಇತರರೊಡನೆ ವ್ಯವಹರಿಸುವಾಗ/ಒಡನಾಡುವಾಗ ಒಳ್ಳೆಯ ನಡೆನುಡಿಗಳಿಂದ ವರ್ತಿಸುವುದು/ತನಗೆ ಒಳಿತನ್ನು ಬಯಸುವಂತೆಯೇ ಇತರರ ಒಳಿತಿಗಾಗಿಯೂ ದುಡಿಯುವುದು; ಕೂಡಲಸಂಗಮದೇವರ್+ಅನ್+ಒಲಿಸುವ; ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು; ಅನ್=ಅನ್ನು; ಒಲಿ=ಮೆಚ್ಚು/ ಒಪ್ಪು/ಪ್ರೀತಿಸು ; ಒಲಿಸುವ=ಮೆಚ್ಚುಗೆಯನ್ನು ಪಡೆಯುವ/ಒಪ್ಪುವಂತೆ ಮಾಡುವ; ಪರಿ=ರೀತಿ/ಕ್ರಮ/ಬಗೆ;

ನಮ್ಮ ಕೂಡಲಸಂಗಮದೇವರನೊಲಿಸುವ ಪರಿ= ಕೂಡಲಸಂಗಮದೇವನನ್ನು ಒಲಿಸಿಕೊಳ್ಳಬೇಕಾದರೆ, ವ್ಯಕ್ತಿಯ ಮಯ್ ಮನದಲ್ಲಿ ಮೂಡುವ ಚಿಂತನೆಗಳು ಮತ್ತು ದಿನನಿತ್ಯದ ವ್ಯವಹಾರಗಳಲ್ಲಿ ಮಾಡುವ ಕೆಲಸಗಳೆಲ್ಲವೂ ತನಗೆ ಒಳಿತನ್ನುಂಟು ಮಾಡುವಂತೆಯೇ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟು ಮಾಡುವಂತಿರಬೇಕು. ಸಾಮಾಜಿಕವಾಗಿ ಒಳ್ಳೆಯ ವ್ಯಕ್ತಿತ್ವವನ್ನು ಹೊಂದಿರುವುದೇ ದೇವರನ್ನು ಒಲಿಸಿಕೊಳ್ಳಲು ಇರುವ ದಾರಿ ಎಂಬುದನ್ನು ವಚನಕಾರನು ಈ ನುಡಿಗಳಲ್ಲಿ ಸೂಚಿಸಿದ್ದಾನೆ.)



೯)    ಕಾಲಲಿ ಕಟ್ಟಿದ ಗುಂಡು
ಕೊರಳಲಿ ಕಟ್ಟಿದ ಬೆಂಡು

ತೇಲಲೀಯದು ಗುಂಡು
ಮುಳುಗಲೀಯದು ಬೆಂಡು

ಇಂತಪ್ಪ
ಸಂಸಾರಶರಧಿಯ ದಾಂಟಿಸಿ

ಕಾಲಾಂತಕನೆ ಕಾಯೋ
ಕೂಡಲಸಂಗಯ್ಯಾ.

ಇತ್ತ ನಿಸರ್ಗದ ನೆಲೆಯಲ್ಲಿ ಒಂದು ಪ್ರಾಣಿಯಾಗಿ, ಅತ್ತ ಸಾಮಾಜಿಕ ನೆಲೆಯಲ್ಲಿ ಒಬ್ಬ ಮಾನವ ಜೀವಿಯಾಗಿ ಬಾಳುತ್ತಿರುವ ವ್ಯಕ್ತಿಯ ಮಯ್ ಮನದ ತೊಳಲಾಟವನ್ನು ಈ ವಚನದಲ್ಲಿ ಹೇಳಲಾಗಿದೆ.

'ನಿಸರ್ಗದ ನೆಲೆ' ಎಂದರೆ ಜೀವಿಗಳು ಹುಟ್ಟಿ ಬೆಳೆದು ಬಾಳಿ ಅಳಿಯುತ್ತಿರುವುದಕ್ಕೆ ನೆಲೆಯಾಗಿರುವ ಈ ಜಗತ್ತು.

'ಸಾಮಾಜಿಕ ನೆಲೆ' ಎಂದರೆ ಮಾನವ ಸಮುದಾಯವು ಕಟ್ಟಿಕೊಂಡಿರುವ ಜಾತಿ, ಮತ, ಕುಟುಂಬ, ವಿದ್ಯೆ, ಕಾನೂನು. ಆಡಳಿತ ಮುಂತಾದ ಸಾಮಾಜಿಕ ಒಕ್ಕೂಟಗಳು.

(ಕಾಲ್+ಅಲ್+ಇ; ಕಾಲು=ನಡೆಯಲು ಬಳಸುವ ಅಂಗ/ಮೊಣಕಾಲಿನಿಂದ ಪಾದದವರೆಗಿನ ಅಂಗ;

ಕಾಲಲಿ=ಕಾಲಿನಲ್ಲಿ; ಕಟ್ಟು=ಬಿಗಿದು/ತೊಡಿಸು; ಕಟ್ಟಿದ=ಬಿಗಿದಿರುವ/ತೊಡಿಸಿರುವ; ಗುಂಡು=ದುಂಡಗೆ ಮತ್ತು ದಪ್ಪಗಿರುವ ಕಲ್ಲು/ದೊಡ್ಡ ಕಲ್ಲು; ಕೊರಳ್+ಅಲಿ;

ಕೊರಳ್/ಕೊರಳು=ಕತ್ತು/ಕುತ್ತಿಗೆ; ಕೊರಳಲಿ=ಕತ್ತಿನಲ್ಲಿ/ಕುತ್ತಿಗೆಯಲ್ಲಿ;

ಬೆಂಡು=ಜೋಳದ ದಂಟು/ಸೋರೆಕಾಯಿಯ ಒಣಗಿದ ಬುಂಡೆ/ನೀರಿನಲ್ಲಿ ಮುಳುಗದೆ ಮೇಲೆ ಮೇಲೆ ತೇಲುವ ದಂಟು/ಈಜುಗಾರರು ಬಳಸುವ ಬುರುಡೆ; ತೇಲ್+ಅಲ್+ಈಯದು; ತೇಲ್/ತೇಲು=ನೀರಿನಲ್ಲಿ ಮುಳುಗದೆ ಮೇಲೆಯೇ ಇರುವುದು/ ಚಲಿಸುವುದು; ತೇಲಲು=ನೀರಿನ ಮೇಲೆಯೇ ಇರಲು/ಚಲಿಸಲು; ಈ=ಕೊಡು/ ಅವಕಾಶವನ್ನು ನೀಡು; ಈಯದು=ಕೊಡುವುದಿಲ್ಲ/ಬಿಡುವುದಿಲ್ಲ;

ಕಾಲಲಿ ಕಟ್ಟಿದ ಗುಂಡು ಕೊರಳಲಿ ಕಟ್ಟಿದ ಬೆಂಡು ತೇಲಲೀಯದು ಗುಂಡು ಮುಳಗಲೀಯದು ಬೆಂಡು=ಒಬ್ಬ ವ್ಯಕ್ತಿಯ ಕಾಲಿಗೆ ಅತ್ತ ದೊಡ್ಡ ಕಲ್ಲೊಂದನ್ನು ಬಿಗಿದು ಕಟ್ಟಿ, ಇತ್ತ ಅವನ ಕೊರಳಿಗೆ ಬೆಂಡನ್ನು ಬಿಗಿದು ನೀರಿನಿಂದ ತುಂಬಿರುವ ಆಳವಾದ ಕೊಳ/ಕೆರೆಯೊಳಕ್ಕೆ ಅವನನ್ನು ಎಸೆಯಲಾಗಿದೆ. ಕಾಲಲ್ಲಿ ಕಟ್ಟಿರುವ ದೊಡ್ಡ ಕಲ್ಲಿನ ಗುಂಡು ಅವನ ಮಯ್ಯನ್ನು ನೀರಿನ ಒಳಕ್ಕೆ ಎಳೆದುಕೊಳ್ಳುತ್ತಿದ್ದರೆ, ಕೊರಳಿಗೆ ಕಟ್ಟಿರುವ ಬೆಂಡು ಅವನ ಮಯ್ಯನ್ನು ನೀರಿನೊಳಗೆ ಮುಳುಗಲು ಬಿಡದೆ ಮೇಲಕ್ಕೆ ಎಳೆಯುತ್ತಿದೆ. ಇತ್ತ ಬದುಕಲು ಬಿಡದೆ, ಅತ್ತ ಸಾಯಲು ಬಿಡದೆ ಗುಂಡು/ಬೆಂಡುಗಳು ಅವನ ಮಯ್ಯನ್ನು ತಮ್ಮತ್ತ ಸೆಳೆಯುತ್ತಿರುವ ಈ ಪ್ರಸಂಗವನ್ನು ನಿಸರ್ಗ ಮತ್ತು ಸಮಾಜದ ನೆಲೆಗಳ ನಡುವೆ ಬಾಳುತ್ತಿರುವ ವ್ಯಕ್ತಿಯ ಮಯ್ ಮನದ ತೊಳಲಾಟವನ್ನು ನಿರೂಪಿಸಲು ಒಂದು ರೂಪಕವಾಗಿ ವಚನಕಾರನು ಚಿತ್ರಿಸಿದ್ದಾನೆ.

ಹೊಟ್ಟೆಯ ಹಸಿವು ಮತ್ತು ಮಯ್ಯಿನ ಕಾಮದ ಒಳಮಿಡಿತಗಳು ವ್ಯಕ್ತಿಯನ್ನು ಜೀವನದ ಉದ್ದಕ್ಕೂ ನಿರಂತರವಾಗಿ ಕಾಡುತ್ತಿರುತ್ತವೆ. ಅಂತೆಯೇ ವ್ಯಕ್ತಿಯು ಹುಟ್ಟಿ ಬೆಳೆದು ಬಾಳುತ್ತಿರುವ ಸಮಾಜದ ಕಟ್ಟುಪಾಡುಗಳು/ಸಂಪ್ರದಾಯಗಳು/ಆಚರಣೆಗಳು ಮತ್ತು ಆಡಳಿತದ ಕಾನೂನುಗಳು ಅವನನ್ನು 'ಹೀಗೆ ಮಾಡಬೇಕು/ಹೀಗೆ ಮಾಡಬಾರದು' ಎಂದು ನಿಯಂತ್ರಿಸುತ್ತಿವೆ. ನಿಸರ್ಗ ಸಹಜವಾದ ಹಸಿವು, ಕಾಮದ ಸೆಳೆತ ಮತ್ತು ಮಾನವ ನಿರ್ಮಿತ ಕಟ್ಟುಪಾಡುಗಳ ನಡುವೆ ಸಿಲುಕಿರುವ ವ್ಯಕ್ತಿಯು ಸದಾಕಾಲ ಇಬ್ಬಗೆಯ ತುಯ್ದಾಡುವಿಕೆಯಲ್ಲಿ ಒದ್ದಾಡುತ್ತಿರುತ್ತಾನೆ.

ಒಂದು ಕಡೆ ಮಯ್ಯಿನ ಕಾಮನೆಯು ತನ್ನ ಆಸೆಯನ್ನು ಪೂರಯಿಸಿಕೊಳ್ಳಲು ಹಂಬಲಿಸುತ್ತಿದ್ದರೆ, ಮತ್ತೊಂದೆಡೆ ಅದನ್ನು ಬಂದ ಹಾಗೆಯೇ ಹರಿಯಬಿಡದಂತೆ ಸಮಾಜದ ಕಟ್ಟಲೆಗಳು ತಡೆಹಿಡಿದಿವೆ. ಆದುದರಿಂದಲೇ ಪ್ರತಿಯೊಬ್ಬ ವ್ಯಕ್ತಿಯು ತನ್ನ ಜೀವನದ ಅನೇಕ ಸನ್ನಿವೇಶಗಳಲ್ಲಿ "ಯಾವುದು ಸರಿ/ಯಾವುದು ತಪ್ಪು; ಯಾವುದು ನೀತಿ/ಯಾವುದು ಅನೀತಿ; ಯಾವುದು ನ್ಯಾಯ/ಯಾವುದು ಅನ್ಯಾಯ; ಎಂಬುದನ್ನು ಸರಿಯಾಗಿ ಅರಿಯಲಾಗದೆ, ಇಬ್ಬಗೆಯ ಸಂಕಟಕ್ಕೆ ಒಳಗಾಗಿ ತೊಳಲಾಡುತ್ತ, ಒಳಿತು

ಕೆಡುಕಿನ ಒಳಮಿಡಿತಗಳಿಂದ ಪರಿತಪಿಸುತ್ತಿರುತ್ತಾನೆ ಎಂಬ ತಿರುಳನ್ನು ಈ ರೂಪಕವು ಸೂಚಿಸುತ್ತಿದೆ.

ಇಂತು+ಅಪ್ಪ; ಇಂತು=ಈ ರೀತಿ/ಬಗೆ; ಅಪ್ಪ=ಆಗಿರುವ; ಇಂತಪ್ಪ=ಈ ರೀತಿಯಲ್ಲಿರುವ/ಬಗೆಯಲ್ಲಿರುವ; ಸಂಸಾರ=ಬದುಕು/ಬಾಳು/ಲೋಕದ ಜೀವನ; ಶರಧಿ=ಕಡಲು/ಸಮುದ್ರ/ಸಾಗರ; ಸಂಸಾರಶರಧಿ=ಮಾನವರ ಬದುಕಿನಲ್ಲಿ ಉಂಟಾಗುವ ಏರಿಳಿತಗಳಿಗೆ ಮತ್ತು ಒಲವು ನಲಿವು ಸಾವು ನೋವಿನಿಂದ ಕೂಡಿದ ಆಗುಹೋಗುಗಳಿಗೆ/ಪ್ರಸಂಗಗಳಿಗೆ ಮೊದಲಿಲ್ಲ ಕಡೆಯಿಲ್ಲ. ಆದ್ದರಿಂದ ಒಂದೇ ನೋಟದಲ್ಲಿ ತುದಿ ಮೊದಲನ್ನು ಕಾಣಲಾಗದ ಸಾಗರದ ವಿಸ್ತಾರಕ್ಕೆ/ಆಳಕ್ಕೆ ಮಾನವರ ಜೀವನವನ್ನು ಹೋಲಿಸುತ್ತಾರೆ; 'ಸಂಸಾರಶರಧಿ' ಎನ್ನುವ ಪದರೂಪವು ಈ ಬಗೆಯ ತಿರುಳಿನಲ್ಲಿ ಒಂದು ನುಡಿಗಟ್ಟಾಗಿ ಬಳಕೆಯಲ್ಲಿದೆ;

ದಾಂಟು=ಹಾರು/ನೆಗೆ/ಜಿಗಿ; ದಾಂಟಿಸಿ=ದಾಟಿಹೋಗುವಂತೆ ಮಾಡಿ/ಜಿಗಿದು ಪಾರಾಗುವಂತೆ ಮಾಡಿ; ಕಾಲ+ಅಂತಕ; ಕಾಲ=ಯಮ; ಅಂತಕ=ಕೊಂದವನು/ವಿನಾಶಕ; ಕಾಲಾಂತಕ=ಶಿವ/ಈಶ್ವರ/ಯಮನನ್ನು ಕೊಂದವನು; ಕಾಯ್=ಕಾಪಾಡು/ಉಳಿಸು/ಸಲಹು; ಕೂಡಲಸಂಗ+ಅಯ್ಯಾ; ಕೂಡಲಸಂಗ=ಬಸವಣ್ಣನ ಮೆಚ್ಚಿನ ದೇವರು;

ಸಂಸಾರಶರಧಿಯ ದಾಂಟಿಸಿ ಕಾಲಾಂತಕನೆ ಕಾಯೋ ಕೂಡಲಸಂಗಯ್ಯಾ= ಜೀವನದಲ್ಲಿ ಕೆಟ್ಟ ನಡೆನುಡಿಗಳಿಗೆ ಬಲಿಯಾಗದೆ, ಅರಿವು ಮತ್ತು ಎಚ್ಚರದ ನಡೆನುಡಿಗಳಿಂದ ಬಾಳುವಂತೆ ಮಾಡು ಎಂದು ವ್ಯಕ್ತಿಯು ಶಿವನಲ್ಲಿ ಮೊರೆಯಿಡುತ್ತಿದ್ದಾನೆ.)



೧೦) ಕೊಂಬೆಯ ಮೇಲಣ ಮರ್ಕಟನಂತೆ
ಲಂಘಿಸುವುದೆನ್ನ ಮನವು

ನಿಂದಲ್ಲಿ ನಿಲಲೀಯದೆನ್ನ ಮನವು
ಹೊಂದಿದಲ್ಲಿ ಹೊಂದಲೀಯದೆನ್ನ ಮನವು

ಕೂಡಲಸಂಗಮದೇವಾ
ನಿಮ್ಮ ಚರಣಕಮಲದಲ್ಲಿ
ಭ್ರಮರನಾಗಿರಿಸು ನಿಮ್ಮ ಧರ್ಮ.

ವ್ಯಕ್ತಿಯ ಮನದಲ್ಲಿ ನಿರಂತರವಾಗಿ ಉಂಟಾಗುತ್ತಿರುವ ಒಳಮಿಡಿತಗಳ ತೊಳಲಾಟವನ್ನು ಈ ವಚನದಲ್ಲಿ ಹೇಳಲಾಗಿದೆ.

ಇದು ಮೇಲು ನೋಟಕ್ಕೆ ಬಸವಣ್ಣನ ಮನದ ತೊಳಲಾಟದಂತೆ ಕಂಡುಬಂದರೂ ಜೀವನದಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಮನದಲ್ಲಿಯೂ ಈ ಬಗೆಯ ಚಂಚಲತೆಯಿರುತ್ತದೆ.

(ಕೊಂಬೆ=ರೆಂಬೆ/ಟೊಂಗೆ/ಮರದಲ್ಲಿ ಕವಲೊಡೆದು ಬೆಳೆದಿರುವ ಟಿಸಿಲು; ಮೇಲಣ=ಮೇಲಿರುವ/ತುದಿಯಲ್ಲಿರುವ; ಮರ್ಕಟನ+ಅಂತೆ; ಮರ್ಕಟ=ಕೋತಿ/ಮಂಗ/ಕಪಿ; ಅಂತೆ=ಹಾಗೆ/ಆ ರೀತಿ; ಲಂಘಿಸುವುದು+ಎನ್ನ; ಲಂಘನ=ಹಾರುವಿಕೆ/ಜಿಗಿತ/ನೆಗೆತ; ಲಂಘಿಸುವುದು=ಹಾರುವುದು/ನೆಗೆಯುವುದು/ಜಿಗಿಯುವುದು; ಎನ್ನ=ನನ್ನ; ಮನ=ಮನಸ್ಸು;

ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು=ಮರದ ಕೊಂಬೆಯ ಮೇಲೆ ಕುಳಿತಿರುವ ಕೋತಿಯು ಒಂದು ಗಳಿಗೆಯಾದರೂ ತಾನಿದ್ದ ಕಡೆಯಲ್ಲಿ ಇರದೆ, ಮರದಲ್ಲಿರುವ ಹಲವಾರು ಕೊಂಬೆರೆಂಬೆಗಳ ಮೇಲೆ ಪದೇ ಪದೇ ನೆಗೆದಾಡುತ್ತಿರುವಂತೆ ನನ್ನ ಮನಸ್ಸು ಹತ್ತಾರು ಸಂಗತಿಗಳ ಕಡೆಗೆ ಆಸೆಯಿಂದ ಹಂಬಲಿಸುತ್ತ/ಹೆದರಿಕೆಯಿಂದ ತತ್ತರಿಸುತ್ತ/ಕೋಪದಿಂದ ಕೆರಳುತ್ತ/ಹಿಂಜರಿಕೆಯಿಂದ ನರಳುತ್ತ ನೂರಾರು ಬಗೆಯ ಒಳಮಿಡಿತಗಳಿಂದ ತುಡಿಯುತ್ತಿದೆ;

ನಿಂದ+ಅಲ್ಲಿ; ನಿಂದ=ನಿಂತುಕೊಂಡ; ಅಲ್ಲಿ=ಎಡೆ/ಜಾಗ/ನೆಲೆ; ನಿಂದಲ್ಲಿ=ನಿಂತಿರುವ ಎಡೆಯಲ್ಲಿ/ಇರುವ ನೆಲೆಯಲ್ಲಿ; ನಿಲ್+ಅಲ್+ಈಯದು+ಎನ್ನ; ನಿಲ್=ನಿಂತುಕೊಳ್ಳುವುದು; ನಿಲಲ್=ನಿಂತುಕೊಂಡಿರಲು/ನಿಂತಿರಲು/ಇದ್ದ ಕಡೆಯಲ್ಲಿಯೇ ಇರಲು; ಈ=ಕೊಡು/ಅವಕಾಶವನ್ನು ನೀಡು; ಈಯದು=ಕೊಡುವುದಿಲ್ಲ/ಬಿಡುವುದಿಲ್ಲ;

ನಿಂದಲ್ಲಿ ನಿಲಲೀಯದೆನ್ನ ಮನವು=ಯಾವುದೇ ವಿಚಾರವನ್ನು ಕುರಿತು ಒಂದು ನಿರ್ಣಯಕ್ಕೆ ಬರಲಾಗದೆ/ಒಂದು ನೆಲೆಯಲ್ಲಿ ಇರಲಾಗದೆ ನನ್ನ ಮನಸ್ಸು ಇಬ್ಬಗೆಯ ಸೆಳೆತದಲ್ಲಿ ತುಯ್ದಾಡುತ್ತಿದೆ;

ಹೊಂದಿದ+ಅಲ್ಲಿ; ಹೊಂದು=ಪಡೆ/ಗಳಿಸು/ಕೂಡು/ಸೇರು; ಹೊಂದಿದಲ್ಲಿ=ಪಡೆದುಕೊಂಡಿರುವುದರಲ್ಲಿ/ಗಳಿಸಿರುವುದರಲ್ಲಿ/ಕೂಡಿರುವ ಎಡೆಯಲ್ಲಿ; ಹೊಂದಲು+ಈಯದು+ಎನ್ನ; ಹೊಂದಲು=ಪಡೆಯಲು/ಸೇರಲು;

ಹೊಂದಿದಲ್ಲಿ ಹೊಂದಲೀಯದೆನ್ನ ಮನವು=ಬಾಳುತ್ತಿರುವ ನೆಲೆಯಲ್ಲಿ ನೆಮ್ಮದಿಯಿಂದ ಇರಲು ನನ್ನ ಮನಸ್ಸು ಅವಕಾಶವನ್ನು ನೀಡುತ್ತಿಲ್ಲ. ಬದುಕಿನ ಆಗುಹೋಗುಗಳಲ್ಲಿ ಒಂದಲ್ಲ ಒಂದು ಬಗೆಯ ಅರೆಕೊರೆಗಳನ್ನು ಕಾಣುತ್ತ, ಸದಾ ಕಾಲ ಒತ್ತಡ/ಆತಂಕ/ತಲ್ಲಣ/ಕೋಪ/ತಾಪಗಳಿಂದ ಮನಸ್ಸು ತತ್ತರಿಸುತ್ತಿದೆ.

ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು ಮತ್ತು ಬಸವಣ್ಣನ ವಚನಗಳ ಅಂಕಿತನಾಮ;

ನಿಮ್ಮ=ದೇವರ/ಶಿವನ/ಈಶ್ವರನ; ಚರಣ=ಪಾದ/ಅಡಿ/ಕಾಲು; ಕಮಲ=ತಾವರೆ/ಒಂದು ಬಗೆಯ ಹೂವು; ಭ್ರಮರನ್+ಆಗಿ+ಇರಿಸು; ಭ್ರಮರ=ದುಂಬಿ/ತುಂಬಿ/ಬಂಡುಣಿ; ಇರಿಸು=ಇಡು/ಇರುವಂತೆ ಮಾಡು;

'ಚರಣಕಮಲ' ಮತ್ತು 'ಭ್ರಮರ' ಎಂಬ ಪದಗಳು ರೂಪಕಗಳಾಗಿ ಬಳಕೆಗೊಂಡಿವೆ; ಶಿವನ ಪಾದವನ್ನು ಕಮಲವೆಂದು ಮತ್ತು ಶಿವಶರಣನಾದ ವಚನಕಾರನು ತನ್ನನ್ನು ತಾನು ಭ್ರಮರವೆಂದು ಚಿತ್ರಿಸಿಕೊಂಡಿದ್ದಾನೆ; ಧರ್ಮ=ಕರುಣೆ/ದಯೆ/ಅನುಗ್ರಹ; ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರಿಸು ನಿಮ್ಮ ಧರ್ಮ=ದುಂಬಿಯು ಹೇಗೆ ತಾವರೆಯ ಹೂವಿನಲ್ಲಿರುವ ಮಕರಂದವನ್ನು ಹೀರಿಕೊಂಡು ಬಾಳುತ್ತದೆಯೋ ಅಂತೆಯೇ ಜೀವನದಲ್ಲಿ ಒಳ್ಳೆಯ ನಡೆನುಡಿಗಳನ್ನು ಪಡೆದುಕೊಂಡು ನೆಮ್ಮದಿಯಿಂದ ಬಾಳುವಂತೆ ನನ್ನ ಮನಸ್ಸಿಗೆ ಪ್ರೇರಣೆಯನ್ನು ನೀಡು ಎಂದು ಕೂಡಲಸಂಗಮದೇವನಲ್ಲಿ ವಚನಕಾರನು ಮೊರೆಯಿಡುತ್ತಿದ್ದಾನೆ.)



೧೧) ತನಗೆ ಮುನಿವರಿಗೆ
ತಾ ಮುನಿಯಲೇಕಯ್ಯಾ

ತನಗಾದ ಆಗೇನು
ಅವರಿಗಾದ ಚೇಗೆಯೇನು

ತನುವಿನ ಕೋಪ
ತನ್ನ ಹಿರಿಯತನದ ಕೇಡು

ಮನದ ಕೋಪ
ತನ್ನ ಅರಿವಿನ ಕೇಡು

ಮನೆಯೊಳಗಣ ಕಿಚ್ಚು
ಮನೆಯ ಸುಟ್ಟಲ್ಲದೆ

ನೆರೆಮನೆಯ ಸುಡದು
ಕೂಡಲಸಂಗಮದೇವಾ.

**ವ್ಯಕ್ತಿಯು ತನ್ನ ಮಯ್ ಮನದಲ್ಲಿ ಮೂಡುವ ಕೋಪವನ್ನು ಹತೋಟಿಯಲ್ಲಿಟ್ಟು ಕೊಂಡು ಎಚ್ಚರದಿಂದ ಬಾಳಬೇಕೆಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ತನಗೆ=ವ್ಯಕ್ತಿಗೆ; ಮುನಿ=ಸಿಟ್ಟಾಗು/ಕೋಪಗೊಳ್ಳು; ತನಗೆ ಮುನಿವರಿಗೆ=ತನ್ನ ನಡೆನುಡಿಗಳನ್ನು ಕಂಡು ಕೋಪಗೊಳ್ಳುವ ವ್ಯಕ್ತಿಯ ಬಗ್ಗೆ; ತಾ=ತಾನು/ವ್ಯಕ್ತಿಯು; ಮುನಿ+ಅಲ್+ಏಕೆ+ಅಯ್ಯಾ; ಮುನಿಯಲ್=ಸಿಟ್ಟುಗೊಳ್ಳುವುದು/ಕೋಪಗೊಳ್ಳುವುದು;

ಏಕೆ=ಯಾವುದಕ್ಕಾಗಿ; ಅಯ್ಯಾ=ವ್ಯಕ್ತಿಯನ್ನು ಒಲವು ನಲಿವಿನಿಂದ ಮಾತನಾಡಿ ಸುವಾಗ ಬಳಸುವ ಪದ;

ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ=ತನ್ನ ಬಗ್ಗೆ ಕೋಪಗೊಂಡು ಕೆಟ್ಟ ರೀತಿಯಿಂದ ನಡೆದುಕೊಳ್ಳುತ್ತಿರುವ ವ್ಯಕ್ತಿಯ ಬಗ್ಗೆ ತಾನೂ ಅದೇ ಬಗೆಯಲ್ಲಿ

ಕೋಪಗೊಳ್ಳುವುದರಿಂದ ಏನು ತಾನೆ ಪ್ರಯೋಜನ. ಅಂದರೆ ಇಬ್ಬರೂ ಕೋಪ ಗೊಳ್ಳುವುದರಿಂದ ಆ ಸನ್ನಿವೇಶದಲ್ಲಿ ಉಂಟಾಗಿರುವ ತೊಡಕು/ಸಮಸ್ಯೆಯು ತಂತಾನೇ ನಿವಾರಣೆಯಾಗುವುದಿಲ್ಲ;

ತನಗೆ+ಆದ; ಆಗು+ಏನು; ಆಗು=ದೊರಕುವುದು/ಒದಗಿ ಬರುವುದು/ಪಾಲಿಗೆ ಬರುವುದು/ಜರುಗುವುದು; ಏನು=ಯಾವುದು; ಅವರಿಗೆ+ಆದ; ಚೇಗೆ+ಏನು; ಚೇಗೆ=ಕೇಡು/ಹಾನಿ;

ತನಗಾದ ಆಗೇನು ಅವರಿಗಾದ ಚೇಗೆಯೇನು=ಕೋಪಗೊಂಡ ವ್ಯಕ್ತಿಯ ಎದುರಾಗಿ ತಾನು ಕೋಪವನ್ನು ಮಾಡಿಕೊಳ್ಳುವುದರಿಂದ ತನಗೆ ಉಂಟಾದ ಒಳಿತೇನು, ಅವರಿಗೆ ಆದ ಕೇಡೇನು. ಅಂದರೆ ಕೋಪಗೊಂಡ ಮಾತ್ರದಿಂದಲೇ ವ್ಯಕ್ತಿಗೆ ಒಳಿತಾಗಲೀ, ಎದುರಾಳಿಗೆ ಕೇಡಾಗಲೀ ತಟ್ಟುವುದಿಲ್ಲ;

ತನು=ಮಯ್/ದೇಹ/ಶರೀರ; ಕೋಪ=ಸಿಟ್ಟು/ಮುನಿಸು;

ಕೋಪ ಎಂಬ ಒಳಮಿಡಿತವು ವ್ಯಕ್ತಿಯ ಮಯ್ ಮನದಲ್ಲಿ ಹೇಗೆ ಮೂಡುತ್ತದೆ ಮತ್ತು ಅದರಿಂದ ಉಂಟಾಗುವ ಪರಿಣಾಮಗಳೇನೆಂಬುದನ್ನು ತಿಳಿದುಕೊಂಡಾಗ, ಕೋಪದ ಜತೆಜತೆಯಲ್ಲಿಯೇ ಒದಗಿ ಬರುವ ಸಂಕಟ/ಬೇಗೆ/ಬವಣೆ/ಸಾವು/ನೋವು ಗಮನಕ್ಕೆ ಬರುತ್ತವೆ. ವ್ಯಕ್ತಿಯು ತಾನು ಆಸೆಪಟ್ಟಿದ್ದನ್ನು ಪಡೆಯುವುದಕ್ಕೆ ಇಲ್ಲವೇ ತಾನು ಮಾಡುವ ಕೆಲಸಕ್ಕೆ ಅಡ್ಡಿ ಆತಂಕಗಳು ಉಂಟಾದಾಗ, ಅದಕ್ಕೆ ಕಾರಣವಾದ ವಸ್ತು/ ಜೀವಿ/ವ್ಯಕ್ತಿಯ ಮೇಲೆ ಮರುಗಳಿಗೆಯಲ್ಲಿಯೇ ಮನದಲ್ಲಿ ಮೂಡುವ ಒಳಮಿಡಿತವೇ ಕೋಪ.

ಕೋಪದಿಂದ ಕೆರಳಿದ ವ್ಯಕ್ತಿಯು ಕೋಪಕ್ಕೆ ಕಾರಣವಾದ ವಸ್ತು/ಜೀವಿ/ವ್ಯಕ್ತಿಯ ಮೇಲೆ ಹಲ್ಲೆ/ದಾಳಿ ಮಾಡಲು ಮುನ್ನುಗ್ಗುತ್ತಾನೆ. ಈ ದಾಳಿಯು ಮಾತಿನ ರೂಪದ ಬಯ್ಗುಳವಾಗಿರಬಹುದು ಇಲ್ಲವೇ ಹೊಡೆಯುವ ಏಟುಗಳಾಗಿರಬಹುದು.

ಕೋಪಗೊಂಡ ಗಳಿಗೆಯಲ್ಲಿ ಮುರಿದು/ಎಸೆದು/ತುಳಿದು ಹಾಕಿದ ವಸ್ತುಗಳು ಮತ್ತೆ ಉಪಯೋಗಕ್ಕೆ ಬಾರದಂತೆ ಹಾಳಾಗುತ್ತವೆ; ಬಯ್ಯಿಸಿಕೊಂಡ/ಹೊಡೆಸಿಕೊಂಡ ವ್ಯಕ್ತಿಯ ಜತೆಯ ನಂಟು ಮುರಿದುಬೀಳುತ್ತದೆ ಇಲ್ಲವೇ ಆ ವ್ಯಕ್ತಿಯ ಜತೆಯಲ್ಲಿ ಗುದ್ದಾಟ/ಹೊಡೆದಾಟ ನಡೆದು ಹಲವು ರೀತಿಯಲ್ಲಿ ಇಬ್ಬರಿಗೂ ಹಾನಿಯುಂಟಾಗುತ್ತದೆ. ಅರೆಗಳಿಗೆಯ ಕೋಪವು ವ್ಯಕ್ತಿಯ ಬದುಕನ್ನೇ ದುರಂತದತ್ತ ದೂಡಬಲ್ಲದ್ದಾಗಿರುತ್ತದೆ.

ತನ್ನ=ಕೋಪಗೊಂಡ ವ್ಯಕ್ತಿಯು; ಹಿರಿದು=ದೊಡ್ಡದು/ಮಿಗಿಲಾದುದು/ ಅತಿಶಯವಾದುದು; ಹಿರಿಯತನ=ದೊಡ್ಡತನ/ವಯಸ್ಸಿನಲ್ಲಿ ಇತರರಿಗಿಂತ ದೊಡ್ಡವನು/ ಮಯ್ ಮನವನ್ನು ಹತೋಟಿಯಲ್ಲಿಟ್ಟುಕೊಂಡು ಬಾಳುವ ಗುಣ;

ತನುವಿನ ಕೋಪ ತನ್ನ ಹಿರಿಯತನದ ಕೇಡು=ಯಾವುದೇ ಸನ್ನಿವೇಶದಲ್ಲಿ ವ್ಯಕ್ತಿಯು ಕೋಪದಿಂದ ಕೆರಳಿ, ಕೋಪಕ್ಕೆ ಕಾರಣವಾದ ವಸ್ತುವನ್ನು ಒಡೆದು/ತುಳಿದು ಹಾಳುಮಾಡಿದರೆ/ವ್ಯಕ್ತಿಯ ಮಯ್ ಮೇಲೆ ಕಯ್ ಮಾಡಿ ಹಲ್ಲೆಯನ್ನು ನಡೆಸಿ, ಸಾವು ನೋವುಗಳಿಗೆ ಕಾರಣನಾದರೆ, ಆಗ ಅಂತಹ ವ್ಯಕ್ತಿಯು ತನ್ನ ಒಳ್ಳೆಯತನದ ವ್ಯಕ್ತಿತ್ವಕ್ಕೆ ಕುಂದನ್ನು ತಂದುಕೊಳ್ಳುತ್ತಾನೆ/ ನೋಡುವವರ ಕಣ್ಣಿಗೆ ಮಾನಸಿಕವಾಗಿ ಸಮತೋಲನವನ್ನು ಕಳೆದುಕೊಂಡ ವ್ಯಕ್ತಿಯಾಗಿ ಕಂಡುಬರುತ್ತಾನೆ/ಅವನ ಹಿರಿಯತನದ ವ್ಯಕ್ತಿತ್ವಕ್ಕೆ ಹಾನಿಯುಂಟಾಗುತ್ತದೆ;

ಮನ=ಮನಸ್ಸು/ಚಿತ್ತ; ಅರಿವು=ತಿಳುವಳಿಕೆ/ವಿವೇಕ;

ಮನದ ಕೋಪ ತನ್ನ ಅರಿವಿನ ಕೇಡು=ನಡೆದ ಪ್ರಸಂಗದಿಂದ ಕೆರಳಿದ ವ್ಯಕ್ತಿಯ ತನ್ನ ಮನದೊಳಗೆ ಕೋಪದಿಂದ ಆಕ್ರೋಶಗೊಂಡು ಕುದಿಯತೊಡಗಿದರೆ, ಅದು ಆ ವ್ಯಕ್ತಿಯು ಅರಿವಿಲ್ಲದವನು/ವಿವೇಕವಿಲ್ಲದವನು ಎಂಬುದನ್ನು ಸೂಚಿಸುತ್ತದೆ. ಆದ್ದರಿಂದ ಕೋಪ ಬಂದಾಗ, ವ್ಯಕ್ತಿಯು ಅದನ್ನು ಹತೋಟಿಯಲ್ಲಿಟ್ಟುಕೊಂಡು, ಕೋಪಕ್ಕೆ ಕಾರಣವಾದ ವಸ್ತು/ಜೀವಿ/ವ್ಯಕ್ತಿಗಳ ಮೇಲೆ ಹಲ್ಲೆ ಮಾಡದೆ, ಕೋಪಕ್ಕೆ ಕಾರಣವಾದ ಸಂಗತಿಗಳನ್ನು ಗಮನಿಸಿ, ಅದರಲ್ಲಿನ ತಪ್ಪುಗಳನ್ನು ಗುರುತಿಸಿ, ತಪ್ಪು ತನ್ನಿಂದ ಆಗಿದ್ದರೆ ಅದನ್ನು ತಿದ್ದಿ ಸರಿಪಡಿಸಿಕೊಂಡು, ಇತರರಿಂದ ಆಗಿದ್ದರೆ ಅದನ್ನು ಮತ್ತೆ ಮಾಡದಂತೆ ಅವರಿಗೆ ತಿಳಿಯ ಹೇಳಬೇಕು. ಇಂತಹ ಅರಿವಿನ ನಡೆನುಡಿಯಿಂದ ಕೋಪವು ಕರಗಿ/ಇಲ್ಲವಾಗಿ, ಕೋಪದಿಂದ ಉಂಟಾಗಬಹುದಾಗಿದ್ದ ಕೇಡು ತಪ್ಪುತ್ತದೆ. ಆದುದರಿಂದ ಕೋಪವನ್ನು ನಿಯಂತ್ರಿಸಿಕೊಳ್ಳುವ/ನಿವಾರಿಸಿಕೊಳ್ಳುವ ಬಗೆಯನ್ನು ವ್ಯಕ್ತಿಯು ಅರಿತಿರಬೇಕು;

ಮನೆ+ಒಳಗಣ; ಮನೆ=ವ್ಯಕ್ತಿಗಳು ವಾಸಿಸುವ ಜಾಗ/ಬೀಡು; ಒಳಗಣ= ಒಳಗಡೆಯಿರುವ/ಒಳ ಜಾಗದಲ್ಲಿರುವ; ಕಿಚ್ಚು=ಬೆಂಕಿ/ಅಗ್ನಿ/ತಾಪ; ಸುಟ್ಟು+ಅಲ್ಲದೆ; ಸುಡು=ಬೆಂಕಿಯಲ್ಲಿ ಬೇಯಿಸು/ಉರಿಯಲ್ಲಿ ಬೇಯುವಂತೆ ಮಾಡು; ಅಲ್ಲದೆ=ಹಾಗೆ ಮಾಡದೆ; ನೆರೆ=ಪಕ್ಕ/ಮಗ್ಗುಲು/ಸಮೀಪ/ಹತ್ತಿರ; ನೆರೆಮನೆ=ಪಕ್ಕದ ಮನೆ; ಸುಡದು=ಸುಡುವುದಿಲ್ಲ/ಬೆಂಕಿಗೆ ಆಹುತಿ ತೆಗೆದುಕೊಳ್ಳುವುದಿಲ್ಲ;

ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು=ಈ ನುಡಿಗಳು ಒಂದು ರೂಪಕವಾಗಿ ಬಳಕೆಯಾಗಿವೆ. ಮನೆಯೊಳಗೆ ಹತ್ತಿಕೊಂಡು ಉರಿಯತೊಡಗಿದ ಬೆಂಕಿಯು ಮೊದಲು ತಾನು ಹತ್ತಿಕೊಂಡ ಜಾಗದಲ್ಲಿದ್ದ ವಸ್ತುಗಳನ್ನು ಮತ್ತು ಮನೆಯನ್ನು ಸಂಪೂರ್ಣವಾಗಿ ಸುಟ್ಟು ಕರಕಲು ಮಾಡಿದ ನಂತರವೇ ಪಕ್ಕದ ಮನೆಗೆ ಹಬ್ಬುತ್ತದೆ.

ಅಂತೆಯೇ ವ್ಯಕ್ತಿಯ ಮನದೊಳಗೆ ಮೂಡಿದ ಕೋಪದ ಒಳಮಿಡಿತವು ಇತರರ ಬಗ್ಗೆ ಹೊಟ್ಟೆಕಿಚ್ಚಾಗಿ/ಮತ್ಸರವಾಗಿ/ತಿರಸ್ಕಾರವಾಗಿ/ಅಸೂಯೆಯಾಗಿ/ಸೇಡಾಗಿ ರೂಪುಗೊಂಡು ವ್ಯಕ್ತಿಯ ಮಯ್ ಮನವನ್ನೆಲ್ಲಾ ಆವರಿಸಿಕೊಂಡು, ಕೋಪಗೊಂಡ

ವ್ಯಕ್ತಿಯ ಬದುಕಿನ ನೆಮ್ಮದಿಯನ್ನು ಹಾಳುಮಾಡುತ್ತದೆ/ಜೀವನಕ್ಕೆ ಮಾರಕವಾಗುತ್ತದೆ/ ಸುತ್ತಮುತ್ತಣ ವ್ಯಕ್ತಿಗಳ ಜತೆಯನಂಟನ್ನು ಮುರಿಯುತ್ತದೆ.

ಕೋಪವೆಂಬುದು ಇತರರಿಗೆ ಕೇಡನ್ನು ಉಂಟುಮಾಡುವುದಕ್ಕಿಂತಲೂ ಹೆಚ್ಚಾಗಿ, ಕೋಪಗೊಂಡ ವ್ಯಕ್ತಿಗೆ ಮಾನಸಿಕವಾಗಿ ಹೆಚ್ಚು ಹಾನಿಯನ್ನು ಉಂಟುಮಾಡುತ್ತದೆ. ಆದುದರಿಂದ ಕೋಪವನ್ನು ಹತ್ತಿಕ್ಕಿಕೊಂಡು ಬಾಳುವುದು ಒಳಿತೆಂಬ ಅರಿವನ್ನು ಈ ರೂಪಕ ಸೂಚಿಸುತ್ತಿದೆ; ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು.)



೧೨)  ತನು ಮನ ಧನವ ಹಿಂದಿಕ್ಕಿಕೊಂಡು
ಮಾತಿನ ಬಣಬೆಯ ಮುಂದಿಟ್ಟುಕೊಂಡು
ಒಳಲೊಟ್ಟೆಯ ನುಡಿವವರು
ನೀವೆಲ್ಲರೂ ಕೇಳಿರೆ

ತಲಹಿಲ್ಲದ ಕೋಲು
ಹೊಳ್ಳು ಹಾರುವುದಲ್ಲದೆ
ಗುರಿಯ ತಾಗಬಲ್ಲುದೆ

ಮಾಯಾಪಾಶ ಹಿಂಗಿ
ಮನದ ಗಂಟು ಬಿಡದನ್ನಕ್ಕ
ಕೂಡಲಸಂಗಮದೇವನೆಂತೊಲಿವನಯ್ಯಾ.

ಜನಸಮುದಾಯವು ಉಳಿದು ಬೆಳೆದು ಬಾಳುವುದಕ್ಕೆ ಅಗತ್ಯವಾದ ವಸ್ತುಗಳನ್ನು ತಯಾರಿಸುವ/ತಲುಪಿಸುವ ಕೆಲಸದಲ್ಲಿ ತೊಡಗದೆ, ಜಾಣ್ಮೆಯ ನುಡಿಗಳನ್ನಾಡುತ್ತ ಜನರನ್ನು ಮರುಳುಮಾಡುವ ಮಾತಿನ ಮಲ್ಲರಿಂದ ಯಾವುದೇ ಪ್ರಯೋಜನವಿಲ್ಲವೆಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.

'ಜನಸಮುದಾಯಕ್ಕೆ ಅಗತ್ಯವಾದ ವಸ್ತುಗಳು' ಎಂದರೆ ಅನ್ನ/ಬಟ್ಟೆ/ವಸತಿ/ವಿದ್ಯೆ/ಕೆಲಸ/ಆರೋಗ್ಯ

'ಜನರನ್ನು ಮರುಳುಮಾಡುವುದು' ಎಂದರೆ ವ್ಯಕ್ತಿಯು ತನ್ನ ಮಾತಿನ ಮೋಡಿಯಿಂದ/ಮಾತುಗಾರಿಕೆಯಿಂದ ತಾನು ಹೇಳಿದ್ದೆಲ್ಲವನ್ನೂ ಜನರು ನಂಬುವಂತೆ ಮಾಡುವುದು. ಇಂತಹ ಮಾತುಗಾರನ ಮನಸೆಳೆಯುವಂತಹ ನುಡಿಗಳ ಬಣ್ಣನೆಗೆ/ಸೊಗಸಿಗೆ/ಕುಶಲತೆಗೆ ಒಳಗಾದ ಜನರು, ತಾವು ಕೇಳುತ್ತಿರುವ ಸಂಗತಿಗಳಲ್ಲಿ 'ಯಾವುದು ಸರಿ–ಯಾವುದು ತಪ್ಪು/ಯಾವುದು ದಿಟ–ಯಾವುದು ಸಟೆ/ಯಾವುದು ಒಳಿತು–ಯಾವುದು ಕೆಟ್ಟದ್ದು' ಎಂಬುದನ್ನು ಒರೆಹಚ್ಚಿ ನೋಡುವ ಕಸುವನ್ನು/ಶಕ್ತಿಯನ್ನು ಕಳೆದುಕೊಂಡಿರುತ್ತಾರೆ.

(ತನು=ಮಯ್/ದೇಹ/ಶರೀರ; ಮನ=ಮನಸ್ಸು; ಧನ=ಸಂಪತ್ತು/ಒಡವೆ ವಸ್ತು/ಆಸ್ತಿಪಾಸ್ತಿ/ಹಣಕಾಸು; ಧನವ=ಧನವನ್ನು/ಸಂಪತ್ತನ್ನು; ಹಿಂದೆ+ಇಕ್ಕಿಕೊಂಡು; ಹಿಂದೆ=ಹಿಂಬದಿಯಲ್ಲಿ/ಹಿಂದುಗಡೆ; ಇಕ್ಕು=ಮಡಗು/ಇಡು/ಹಾಕು/ಇರಿಸು; ಅಂತೆ=ಹಾಗೆ/ಆ ರೀತಿಯಲ್ಲಿ/ಆ ಬಗೆಯಲ್ಲಿ; ಹಿಂದಿಕ್ಕಿಕೊಂಡು=ಮರೆಮಾಡಿಕೊಂಡು/ಅಡಗಿಸಿಕೊಂಡು;

'ತನು ಮನ ಧನವ ಹಿಂದಿಕ್ಕಿಕೊಂಡು' ಎಂಬ ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಯಾಗಿವೆ;

ತನುವ ಹಿಂದಿಕ್ಕಿಕೊಂಡು=ಮಯ್ ಮುರಿದು ದುಡಿಮೆಯನ್ನು ಮಾಡದೆ/ತನ್ನ ಪಾಲಿನ ಕೆಲಸವನ್ನು ಒಲವು, ನಲಿವು, ಪ್ರಾಮಾಣಿಕತನದಿಂದ ಮಾಡದೆ/ಸಮಾಜದ ಮತ್ತು ಜನರ ಮುನ್ನಡೆಗೆ ಕಾರಣವಾಗುವ ಯಾವುದೇ ಒಂದು ಕೆಲಸವನ್ನು ಮಾಡದೆ ಮಯ್ಗಳ್ಳನಾಗಿ;

ಮನವ ಹಿಂದಿಕ್ಕಿಕೊಂಡು=ಎಲ್ಲರಿಗೂ ಒಳಿತಾಗಲಿ ಎಂಬ ಒಳ್ಳೆಯ ಚಿಂತನೆ/ಆಲೋಚನೆಗಳನ್ನು ಮಾಡದೆ/ಸಮುದಾಯದ ಜನರೆಲ್ಲರ ಹಿತಕ್ಕೆ ನೆರವಾಗುವಂತಹ ವಿಚಾರಗಳನ್ನು ಮನಸ್ಸಿನಲ್ಲಿ ಎಣಿಸದೆ/ತನ್ನ ಮತ್ತು ತನ್ನವರ ಹಿತವನ್ನು ಮಾತ್ರ ಚಿಂತಿಸುತ್ತ;

ಧನವ ಹಿಂದಿಕ್ಕಿಕೊಂಡು=ಸಮಾಜದ ಮತ್ತು ಜನಸಮುದಾಯದ ಒಳಿತಿಗಾಗಿ ತನ್ನ ಬಳಿಯಿರುವ ಹೆಚ್ಚಿನ ಸಂಪತ್ತನ್ನು ಬಳಸದೆ/ಇತರರ ಒಳಿತಿಗಾಗಿ ಒಂದು ಕಾಸನ್ನು ಬಿಚ್ಚದ ಜಿಪುಣನಾಗಿ;

ತನು ಮನ ಧನವ ಹಿಂದಿಕ್ಕಿಕೊಂಡು=ವ್ಯಕ್ತಿಯ ತನ್ನ ತನುವಿನಿಂದ ಒಳ್ಳೆಯ ದುಡಿಮೆಯನ್ನು ಮಾಡದೆ, ಮನದಿಂದ ಒಳ್ಳೆಯ ಆಲೋಚನೆ ಮಾಡದೆ ಮತ್ತು ಸಂಪತ್ತಿನಿಂದ ಸಮಾಜಕ್ಕೆ ಒಳಿತನ್ನು ಮಾಡದೆ;

ಮಾತು=ನುಡಿ/ಸೊಲ್ಲು; ಬಣಬೆ=ಎಮ್ಮೆ ದನ ಮತ್ತು ಇತರ ಪ್ರಾಣಿಗಳ ಮೇವಿಗೆ ಬಳಕೆಯಾಗುವ ರಾಗಿ/ಬತ್ತ/ಜೋಳದ ಒಣಗಿದ ಕಡ್ಡಿಗಳನ್ನು/ಹುಲ್ಲನ್ನು ಒಂದೆಡೆಯಲ್ಲಿ ಒಟ್ಟಿರುವುದು/ಮೆದೆ/ಹುಲ್ಲಿನ ರಾಶಿ;

ಮಾತಿನ ಬಣಬೆ=ಇದೊಂದು ನುಡಿಗಟ್ಟು. ವ್ಯಕ್ತಿಯು ಇತರರಿಗೆ ಒಳಿತನ್ನು ಉಂಟುಮಾಡುವಂತಹ ಯಾವೊಂದು ಕೆಲಸವನ್ನೂ ಮಾಡದೆ, ಕೇವಲ ಮಾತಿನಲ್ಲೇ ತೊಡಗಿರುವುದು/ನಿಜಜೀವನದಲ್ಲಿ ಆಗದ ಹೋಗದ ಸಂಗತಿಗಳನ್ನು ಸುಮ್ಮನೆ ಹೇಳುತ್ತಿರುವುದು; ಮುಂದೆ+ಇಟ್ಟುಕೊಂಡು; ಮುಂದೆ=ಎದುರಿನಲ್ಲಿ/ಮುಂದುಗಡೆಯಲ್ಲಿ; ಇಟ್ಟುಕೊಂಡು=ಇರಿಸಿಕೊಂಡು/ಮಡಗಿಕೊಂಡು; ಒಳಲೊಟ್ಟೆ=ಕೆಲಸಕ್ಕೆ ಬಾರದ್ದು/ಪ್ರಯೋಜನವಿಲ್ಲದ್ದು/ಹುರುಳಿಲ್ಲದ್ದು; ನುಡಿ=ಮಾತು/ಸೊಲ್ಲು/ಮಾತನ್ನಾಡು/ಹೇಳು; ಒಳಲೊಟ್ಟೆಯ ನುಡಿ=ಪೊಳ್ಳು ಮಾತು/ಕೆಲಸಕ್ಕೆ ಬಾರದ ಮಾತು/ಉಪಯೋಗವಿಲ್ಲದ ಮಾತು;

ಮಾತಿನ ಬಣಬೆಯ ಮುಂದಿಟ್ಟುಕೊಂಡು ಒಳಲೊಟ್ಟೆಯ ನುಡಿವವರು=ಇಲ್ಲಸಲ್ಲದ/ಆಗದ ಹೋಗದ/ಸುಳ್ಳು ಮತ್ತು ಕಲ್ಪಿತ ಸಂಗತಿಗಳಿಂದ ಕೂಡಿದ/ಕಾರ್ಯರೂಪಕ್ಕೆ ಬಾರದ ಮಾತುಗಳನ್ನೇ ಸದಾಕಾಲ ಆಡುತ್ತಿರುವವರು/ಜನಸಮುದಾಯಕ್ಕೆ ಬೇಕಾದ ಅನ್ನ/ಬಟ್ಟೆ/ವಸತಿ/ವಿದ್ಯೆ/ಕೆಲಸ/ಆರೋಗ್ಯವೆಲ್ಲವನ್ನೂ ಮಾತಿನ ಮೋಡಿಯಿಂದಲೇ ಉತ್ಪಾದನೆ ಮಾಡಿ ಕೊಡುವವರಂತೆ ನುಡಿಯುವ ಸುಳ್ಳುಗಾರರು/ಕಪಟಿಗಳು/ವಂಚಕರು;

ನೀವ್+ಎಲ್ಲರೂ; ಕೇಳ್=ಆಲಿಸು/ಕಿವಿಗೊಡು/ಗಮನಿಸು; ನೀವೆಲ್ಲರೂ ಕೇಳಿರೆ=ಮಾತನ್ನೇ ದೊಡ್ಡದೆಂದು ತಿಳಿದು, ಜನರನ್ನು ಮಾತಿನಿಂದಲೇ ಮರುಳುಮಾಡಿ, ಅವರನ್ನು ವಂಚಿಸುವ ಕಲೆಯಲ್ಲಿ ಪರಿಣಿತರಾಗಿರುವ ವ್ಯಕ್ತಿಗಳೇ ನೀವೆಲ್ಲರೂ ಮನವಿಟ್ಟು ಕೇಳಿರಿ;

ತಲಹು+ಇಲ್ಲದ; ತಲುಪು/ತಲಪು>ತಲಹು; ತಲಹು=ಗುರಿ/ಮುಟ್ಟು/ಸೇರು; ಕೋಲು=ಬಾಣ/ಅಂಬು/ಸರಳು; ತಲಹಿಲ್ಲದ ಕೋಲು=ಒಂದು ನಿಶ್ಚಿತ ಗುರಿಯನ್ನು ಹೊಂದದೆ ಹೂಡುವ/ತೊಡುವ ಬಾಣ; ಪೊಳ್ಳು>ಹೊಳ್ಳು; ಹೊಳ್ಳು=ಹೊಟ್ಟು/ತವಡು/ಜೊಳ್ಳು/ಹುರುಳಿಲ್ಲದ್ದು; ಹಾರುವುದು+ಅಲ್ಲದೆ; ಹಾರು=ಜಿಗಿತ/ನೆಗೆತ/ಹಾರಿಕೆ; ಹೊಳ್ಳು ಹಾರುವುದು=ಎತ್ತೆತ್ತಲೋ/ಎತ್ತಲೋ/ಎಲ್ಲೋ ಒಂದು ಕಡೆಗೆ ಹಾರಿ ಹೋಗಿ ಬೀಳುವುದು; ಅಲ್ಲದೆ=ಹಾಗೆ ಮಾಡದೆ; ಗುರಿ=ಸೇರಬೇಕಾದ ಎಡೆ/ಜಾಗ/ಎಲ್ಲೆ; ತಾಗ+ಬಲ್ಲುದೆ; ತಾಗು=ಮುಟ್ಟು/ತಗುಲು/ಚುಚ್ಚು/ನಾಟು; ಬಲ್=ತಿಳಿ/ಅರಿ; ಬಲ್ಲುದೆ=ತಿಳಿದಿದೆಯೆ/ಗೊತ್ತಿದೆಯೆ/ಅರಿತಿದೆಯೆ;

ತಲಹಿಲ್ಲದ ಕೋಲು ಹೊಳ್ಳು ಹಾರುವುದಲ್ಲದೆ ಗುರಿಯ ತಾಗಬಲ್ಲುದೆ= ವ್ಯಕ್ತಿಯು ಬಿಲ್ಲಿಗೆ ಬಾಣವನ್ನು ಹೂಡುವಾಗ ಒಂದು ಗೊತ್ತಾದ ಗುರಿಯತ್ತ ತೊಡದೆ, ಸುಮ್ಮನೆ ಬಾಣವನ್ನು ಬಿಟ್ಟಾಗ, ಅದು ಹಾರಿ ಹೋಗಿ ಎಲ್ಲೋ ಒಂದು ಕಡೆ ಬೀಳುತ್ತದೆ. ಗುರಿಯಿಡದೆ ಬಾಣವನ್ನು ಬಿಡುವ ಮತ್ತು ಅದರಿಂದ ಏನನ್ನು ಪಡೆಯದಿರುವುದನ್ನು ತಿಳಿಸುವ ಈ ರೂಪಕದ ಮೂಲಕ ಕೇವಲ ತೋರಿಕೆಗಾಗಿ ಆಡುವ ಮಾತುಗಳಿಂದ ಸಮಾಜಕ್ಕಾಗಲಿ/ಸಹಮಾನವರಿಗಾಗಲಿ ಯಾವುದೇ ಪ್ರಯೋಜನವಿಲ್ಲವೆಂಬ ಮತ್ತು ಅಂತಹ ಮಾತುಗಾರಿಕೆಯೆಲ್ಲವೂ ಪೊಳ್ಳುತನದಿಂದ ಕೂಡಿರುತ್ತದೆ ಎಂಬುದನ್ನು ಸೂಚಿಸುತ್ತದೆ;

ಮಾಯಾ=ಮಾಯೆ/ವ್ಯಕ್ತಿಯ ಮಯ್ ಮನದಲ್ಲಿ ಬಯಕೆ/ಆಸೆ/ಹಂಬಲವನ್ನು ಮೂಡಿಸಿ ತನ್ನತ್ತ ಸೆಳೆಯುವ ವಸ್ತು/ಜೀವಿ/ವ್ಯಕ್ತಿ; ಪಾಶ=ಹಗ್ಗ/ಬಲೆ/ಜಾಲ/ನೇಣಿನ ಕುಣಿಕೆ/ಪ್ರಾಣಿಗಳನ್ನು ಮತ್ತು ಹಕ್ಕಿಗಳನ್ನು ಹಿಡಿಯಲು ನೂಲಿನಿಂದ ಹೆಣೆದು

ಮಾಡಿರುವ ವಸ್ತು; ಮಾಯಾಪಾಶ=ವ್ಯಕ್ತಿಯು ತಾನು ಪಡೆಯಲು ಹಂಬಲಿಸುತ್ತಿರುವ ವಸ್ತು/ಜೀವಿ/ವ್ಯಕ್ತಿಯನ್ನು ತನ್ನದಾಗಿಸಿಕೊಳ್ಳಲು ಹೆಣಗುತ್ತಿರುವುದು; ಪಿಂಗು>ಹಿಂಗು; ಹಿಂಗು=ಕಡಿಮೆಯಾಗು/ತಗ್ಗು/ಕುಗ್ಗು/ತೊರೆ/ತ್ಯಜಿಸು;

ಮಾಯಾಪಾಶ ಹಿಂಗಿ=ಮನದೊಳಗೆ ತುಡಿಯುತ್ತಿರುವ ಕೆಟ್ಟ ಆಸೆಯು ಇಲ್ಲವಾಗಿ; ಗಂಟು=ಹಗ್ಗ/ದಾರದ ಎಳೆಗಳಿಂದ ಕಟ್ಟಿರುವುದು/ಕೂಡಿರುವುದು/ಕಟ್ಟು; ಮನದ ಗಂಟು=ವ್ಯಕ್ತಿಯ ಮನದಲ್ಲಿ ಒಂದರೊಡನೆ ಮತ್ತೊಂದು ಬೆಸೆದುಕೊಂಡಿರುವ ಒಳಿತು ಕೆಡುಕಿನ ಒಳಮಿಡಿತಗಳು/ತುಡಿತಗಳು; ಬಿಡದ+ಅನ್ನಕ್ಕ; ಬಿಡು=ತೊರೆ/ತ್ಯಜಿಸು; ಅನ್ನಕ್ಕ=ವರೆಗೆ/ಆ ತನಕ/ಅಲ್ಲಿಯವರೆಗೆ;

ಮನದ ಗಂಟು ಬಿಡುವುದು=ಮನದಲ್ಲಿ ತುಡಿಯುವ ಕೆಟ್ಟ ಒಳಮಿಡಿತಗಳನ್ನು ಗುರುತಿಸಿ, ಅವನ್ನು ತೊರೆಯುವುದು/ಹತ್ತಿಕ್ಕಿಕೊಳ್ಳುವುದು;

ಕೂಡಲಸಂಗಮದೇವನ್+ಎಂತು+ಒಲಿ+ಅನ್+ಅಯ್ಯಾ; ಕೂಡಲಸಂಗಮದೇವ =ಬಸವಣ್ಣನ ಮೆಚ್ಚಿನ ದೇವರು; ಎಂತು=ಯಾವ ರೀತಿಯಲ್ಲಿ/ಯಾವ ಬಗೆಯಲ್ಲಿ; ಒಲಿ=ಮೆಚ್ಚು/ಒಪ್ಪು /ಪ್ರೀತಿಸು/ಸಮ್ಮತಿಸು/ಬಯಸು;

ಕೂಡಲಸಂಗಮದೇವನೆಂತೊಲಿವನಯ್ಯಾ=ಕೂಡಲಸಂಗಮದೇವನು ಹೇಗೆ ತಾನೇ ಒಲಿಯುತ್ತಾನೆ/ಮೆಚ್ಚಿಕೊಳ್ಳುತ್ತಾನೆ;

ಮನದಲ್ಲಿ ತುಡಿಯುವ ಕೆಟ್ಟ ಬಯಕೆಗಳನ್ನು ಹತ್ತಿಕ್ಕಿಕೊಂಡು ಜೀವನದಲ್ಲಿ ಒಳ್ಳೆಯ ನಡೆನುಡಿಗಳನ್ನು ಅಳವಡಿಸಿಕೊಂಡು ಬಾಳುವಂತಾದಾಗ ಮಾತ್ರ ಕೂಡಲಸಂಗಮದೇವನು ಒಲಿಯುತ್ತಾನೆ ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು ಎಂಬುದನ್ನು ಈ ನುಡಿಗಳು ಸೂಚಿಸುತ್ತಿವೆ;



೧೩)  ತೊರೆಯ ಮೀವ ಅಣ್ಣಗಳಿರಾ
ತೊರೆಯ ಮೀವ ಸ್ವಾಮಿಗಳಿರಾ

ತೊರೆಯಿಂ ಭೋ ತೊರೆಯಿಂ ಭೋ
ಪರನಾರಿಯರ ಸಂಗವ ತೊರೆಯಿಂ ಭೋ
ಪರಧನದಾಮಿಷವ ತೊರೆಯಿಂ ಭೋ

ಇವ ತೊರೆಯದೆ
ಹೋಗಿ ತೊರೆಯ ಮಿಂದಡೆ

ಬರುದೊರೆ ಹೋಹುದು
ಕೂಡಲಸಂಗಮದೇವಾ.

**ಸಮಾಜ ಒಪ್ಪಿತವಲ್ಲದ ರೀತಿಯಲ್ಲಿ ಕಾಮದ ನಂಟನ್ನು ಹೊಂದಿರುವ ಮತ್ತು ಜನಸಮುದಾಯದ ಸಂಪತ್ತನ್ನು ಲೂಟಿ ಹೊಡೆಯುತ್ತಿರುವ ವ್ಯಕ್ತಿಗಳು ಮಾಡುವ ದೇವರ ಪೂಜೆ/ಆಚರಣೆಗಳು ಪೊಳ್ಳುತನದಿಂದ ಕೂಡಿವೆ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

**ಜಗತ್ತಿನಲ್ಲಿರುವ ಪ್ರತಿಯೊಂದು ಮಾನವ ಸಮುದಾಯದ/ಸಮಾಜದ ನಡಾವಳಿಯಲ್ಲಿ ಗಂಡಸು ಮತ್ತು ಹೆಂಗಸು ಒಬ್ಬರು ಮತ್ತೊಬ್ಬರೊಡನೆ ದೇಹದ ನಂಟನ್ನು ಹೊಂದುವುದಕ್ಕೆ ಹಲವಾರು ಕಟ್ಟುಪಾಡು/ನಿಯಮ/ಸಂಪ್ರದಾಯಗಳಿವೆ. ಇವಕ್ಕೆ ಹೊರತಾಗಿ ಗಂಡು ಮತ್ತು ಹೆಣ್ಣು ಜತೆಗೂಡಿದರೆ ಅದನ್ನು ಸಮಾಜ ಒಪ್ಪಿತವಲ್ಲದ ಕಾಮದ ನಂಟು ಎಂದು ಕರೆಯುತ್ತಾರೆ.**

(ತೊರೆ=ನದಿ/ಹೊಳೆ/ಹರಿವು; ಮೀ=ಮಯ್ಯನ್ನು ತೊಳೆ/ಸ್ನಾನ ಮಾಡು/ಜಳಕ ಮಾಡು; ಮೀವ=ಮಯ್ಯನ್ನು ತೊಳೆಯುವ/ಸ್ನಾನ ಮಾಡುವ; ತೊರೆಯಲ್ಲಿ ಮೀಯುವುದು=ದೇಗುಲಗಳ ಬಳಿ ಹರಿಯುವ ನದಿ/ಹೊಳೆ/ತೊರೆಗಳಲ್ಲಿ ಮಿಂದೇಳುವುದರಿಂದ ವ್ಯಕ್ತಿಯು ತನ್ನ ಜೀವನದ ವ್ಯವಹಾರಗಳಲ್ಲಿ ಮಾಡಿರುವ ಪಾಪಗಳು

ನಿವಾರಣೆಗೊಂಡು, ಇನ್ನು ಮುಂದೆ ಒಳಿತಾಗುವುದೆಂಬ ನಂಬಿಕೆಯು ಜನಮನದಲ್ಲಿ ನೆಲೆಗೊಂಡಿದೆ;

ಅಣ್ಣ=ಗಂಡಸನ್ನು ಒಲವು ನಲಿವು ಆದರದಿಂದ ಮಾತನಾಡಿಸುವಾಗ ಬಳಸುವ ಪದ/ಆಸ್ತಿಪಾಸ್ತಿ ಒಡವೆ ವಸ್ತು ಮತ್ತು ಗದ್ದುಗೆಯನ್ನು ಹೊಂದಿ ಸಮಾಜದಲ್ಲಿ ಎತ್ತರದ ಅಂತಸ್ತನ್ನು ಹೊಂದಿರುವ ವ್ಯಕ್ತಿಯನ್ನು 'ಅಣ್ಣ' ಎಂದು ಕರೆಯುತ್ತಾರೆ; ಅಣ್ಣಗಳಿರಾ= ಅಣ್ಣಂದಿರಾ/ಅಣ್ಣಂದಿರೇ; ಸ್ವಾಮಿ=ಒಡೆಯ/ಯಜಮಾನ/ಜಾತಿಮತದ ಒಕ್ಕೂಟಗಳ ಗುರು/ಜನಸಮುದಾಯದ ಮನ್ನಣೆಗೆ ಪಾತ್ರನಾದ ವ್ಯಕ್ತಿ; ಸ್ವಾಮಿಗಳಿರಾ=ಸ್ವಾಮಿಗಳೇ/ ದೊಡ್ಡವರೇ/ಹಿರಿಯರೇ;

ತೊರೆ+ಇಂ; ತೊರೆ=ಬಿಡು/ತ್ಯಜಿಸು; ತೊರೆಯಿಂ=ತೊರೆಯಿರಿ/ಬಿಡಿರಿ/ತ್ಯಜಿಸಿರಿ/ ಮಾಡಬೇಡಿ; ಭೋ=ಗುರುತರವಾದ ಸಂಗತಿಯೊಂದನ್ನು ಇತರರಿಗೆ ಹೇಳುವಾಗ ಅವರ ಗಮನವನ್ನು ತಮ್ಮತ್ತ ಸೆಳೆದುಕೊಳ್ಳಲೆಂದು ಎತ್ತರದ ದನಿಯಲ್ಲಿ ಹೇಳುವ ಪದ/ಕೇಳುವಂತಹವರಾಗಿ/ಗಮನವಿಟ್ಟು ಆಲಿಸಿ;

ತೊರೆಯಿಂ ಭೋ ತೊರೆಯಿಂ ಭೋ=ಬಿಡ್ರಪ್ಪ ಬಿಡಿ/ಕಡ್ಡಾಯವಾಗಿ ತೊರೆಯಿರಿ/ ಎಂದೆಂದಿಗೂ ಮಾಡಬೇಡಿ;

ಪರ=ಇತರ/ಬೇರೆಯ/ಅನ್ಯ; ನಾರಿ=ಹೆಣ್ಣು/ಹೆಂಗಸು; ಪರನಾರಿಯರು= ಬೇರೆಯ ಹೆಣ್ಣುಗಳು/ಇತರ ಹೆಂಗಸರು; ಸಂಗ=ಒಡನಾಟ/ಕೂಡುವಿಕೆ/ಸೇರುವಿಕೆ; ಸಂಗವ=ಸಂಗವನ್ನು;

ಪರನಾರಿಯರ ಸಂಗವ ತೊರೆಯಿಂ ಭೋ=ಕೇಳಿರಿ/ಮನವಿಟ್ಟು ಆಲಿಸಿ/ಇತ್ತ ಗಮನ ಕೊಡಿ. ಇತರ ಹೆಣ್ಣುಗಳ ಜತೆಯಲ್ಲಿ ಕಾಮದ ನಂಟನ್ನು ಹೊಂದಬೇಡಿ/ ಸಮಾಜ ಒಪ್ಪಿತವಲ್ಲದ ರೀತಿಯಲ್ಲಿ ಬೇರೆಯ ಹೆಣ್ಣುಗಳ ಜತೆಯಲ್ಲಿ ಕಾಮದ ನಂಟನ್ನು ಪಡೆಯಬೇಡಿ. ಏಕೆಂದರೆ ಇಂತಹ ನಂಟಿನಿಂದ ವ್ಯಕ್ತಿಯ ಮತ್ತು ಹೆಣ್ಣಿನ ಕುಟುಂಬಗಳೆರಡರ ನೆಮ್ಮದಿಯು ಹಾಳಾಗುವುದಲ್ಲದೆ, ಎರಡು ಕುಟುಂಬಗಳಿಗೆ ಸೇರಿದ ವ್ಯಕ್ತಿಗಳ ಬದುಕು ಸಾವು ನೋವುಗಳಿಗೆ ಗುರಿಯಾಗುತ್ತದೆ;

ಧನ=ಸಂಪತ್ತು/ಆಸ್ತಿಪಾಸ್ತಿ/ಒಡವೆ ವಸ್ತು/ಹಣಕಾಸು; ಪರಧನ=ಇತರರಿಗೆ/ ಬೇರೆಯವರಿಗೆ ಸೇರಿದ ಸಂಪತ್ತು/ಆಸ್ತಿಪಾಸ್ತಿ; ಆಮಿಷ=ಬಯಕೆ/ಪಡೆಯಬೇಕೆಂಬ ಹಂಬಲ/ತನ್ನದಾಗಿಸಿಕೊಳ್ಳಬೇಕೆಂಬ ತುಡಿತ;

ಪರಧನದಾಮಿಷವ ತೊರೆಯಿಂಭೋ=ಮತ್ತೊಬ್ಬರ ಒಡವೆ/ಸಂಪತ್ತು/ ಆಸ್ತಿಪಾಸ್ತಿಯನ್ನು ಲಪಟಾಯಿಸಬೇಕೆಂಬ ಕೆಟ್ಟ ಆಸೆಯನ್ನು ಬಿಡಿರಿ. ಏಕೆಂದರೆ ಕೆಲವೇ ವ್ಯಕ್ತಿಗಳು ಇತರರಿಗೆ ಮತ್ತು ಸಮಾಜಕ್ಕೆ ಸೇರಿದ ಸಂಪತ್ತನ್ನು ಕೊಳ್ಳೆ ಹೊಡೆದು ಗೋರಿ

ಗುಡ್ಡೆ ಹಾಕಿಕೊಳ್ಳತೊಡಗಿದಾಗ, ಜನಸಮುದಾಯದಲ್ಲಿ ಕೋಟಿಗಟ್ಟಲೆ ಜನರು ತಮ್ಮ ಜೀವನಕ್ಕೆ ಅಗತ್ಯವಾದ ಅನ್ನ/ಬಟ್ಟೆ/ವಸತಿ/ವಿದ್ಯೆ/ಉದ್ಯೋಗ/ಆರೋಗ್ಯದಿಂದ ವಂಚಿತರಾಗಿ ಹಸಿವು/ಬಡತನ/ಅಪಮಾನದ ಬೇಗೆಯಲ್ಲಿ ಬೆಂದು ಬಸವಳಿಯತೊಡಗುತ್ತಾರೆ. ಸಂಪತ್ತಿನ ಸಂಗ್ರಹದಲ್ಲಿ ತೊಡಗುವ ಕೆಲವೇ ವ್ಯಕ್ತಿಗಳ ದುರಾಶೆಯು ಇಡೀ ಸಮಾಜವನ್ನು ಸಂಕಟಕ್ಕೆ ಗುರಿಮಾಡಿ, ಮಾನವ ಸಮುದಾಯದ ಬದುಕನ್ನೇ ದುರಂತದತ್ತ ತಳ್ಳುತ್ತದೆ;

ಇವ=ಇವನ್ನು/ಇಂತಹ ನಡೆನುಡಿಗಳನ್ನು; ತೊರೆಯದೆ=ಬಿಡದೆ/ತ್ಯಜಿಸದೆ; ಇವ ತೊರೆಯದೆ=ಇಂತಹ ಕೆಟ್ಟ ಚಾಳಿಯನ್ನು/ನೀಚತನವನ್ನು ಬಿಡದೆ; ಹೋಗಿ=ದೇವರ ವಿಗ್ರಹಗಳು ನೆಲೆಗೊಂಡಿರುವ ನೆಲೆ/ಊರು/ಜಾಗದ ದಡದಲ್ಲಿರುವ ನದಿ/ಹೊಳೆಯ ಬಳಿಸಾರಿ; ತೊರೆಯ ಮಿಂದಡೆ=ಅಲ್ಲಿ ಹರಿಯುತ್ತಿರುವ ನದಿ/ಹೊಳೆಯಲ್ಲಿ ಮುಳುಗಿ ಎದ್ದರೆ/ಜಳಕ ಮಾಡಿದರೆ/ಸ್ನಾನ ಮಾಡಿದರೆ; ಬರು+ತೊರೆ; ಬರು=ಬರಿದು/ಏನೂ ಇಲ್ಲದಿರುವುದು; ಬರುದೊರೆ=ಯಾವ ತೊರೆಯಲ್ಲಿ ಮಿಂದರೆ ಪಾಪಗಳು ಪರಿಹಾರಗೊಂಡು, ಒಳಿತಾಗುವುದೆಂಬ ನಂಬಿಕೆಯು ಜನಮನದಲ್ಲಿತ್ತೋ, ಅಂತಹ ನಂಬಿಕೆಯು ಇಂತಹ ನೀಚ ವ್ಯಕ್ತಿಗಳ ಪಾಲಿಗೆ ಅನ್ವಯವಾಗುವುದಿಲ್ಲ;

ಹೋಹುದು=ಹರಿಯುತ್ತಿರುವುದು/ಸಾಗುತ್ತಿರುವುದು; ಬರುದೊರೆ ಹೋಹುದು= ನದಿ/ಹೊಳೆಯಲ್ಲಿ ನೀರು ತನ್ನ ಪಾಡಿಗೆ ತಾನು ಹರಿಯುತ್ತಿರುವುದು; ಕೂಡಲ ಸಂಗಮದೇವಾ=ಬಸವಣ್ಣನ ಮೆಚ್ಚಿನ ದೇವರು;

ಇವ ತೊರೆಯದೆ ಹೋಗಿ ತೊರೆಯ ಮಿಂದಡೆ ಬರುದೊರೆ ಹೋಹುದು ಕೂಡಲಸಂಗಮದೇವಾ=ವ್ಯಕ್ತಿಗಳು ತಮ್ಮ ನಿಜಜೀವನದಲ್ಲಿನ ಕೆಟ್ಟ ನಡೆನುಡಿಗಳನ್ನು ತೊರೆಯದೆ ನದಿ/ಹೊಳೆಯಲ್ಲಿ ಮಿಂದ ಮಾತ್ರಕ್ಕೆ, ಅವರ ಬದುಕಿನಲ್ಲಿ ಏನೊಂದು ಬದಲಾವಣೆಯಾಗುವುದಿಲ್ಲ. ಅವರು ಮೊದಲಿನಂತೆಯೇ ಸಮಾಜಕ್ಕೆ ಕೇಡನ್ನು ಬಗೆಯುವ ವ್ಯಕ್ತಿಗಳಾಗಿರುತ್ತಾರೆ.

ದೇವರಿಗೆ ಮಾಡುವ ಪೂಜೆ/ಜಾಗರಣೆ/ಉಪವಾಸ/ನದಿ ಹೊಳೆತೊರೆಗಳಲ್ಲಿ ಮಿಂದೆದ್ದ ಮಾತ್ರಕ್ಕೆ ವ್ಯಕ್ತಿಯಲ್ಲಿರುವ ಕೆಟ್ಟತನ/ನೀಚತನ ಹೋಗುವುದಿಲ್ಲವೆಂಬುದನ್ನು ಈ ನುಡಿಗಳು ಸೂಚಿಸುತ್ತಿವೆ.)



೧೪) ದಯವಿಲ್ಲದ ಧರ್ಮವದೇವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ

ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ.

**ಮಾನವನ ಜೀವನದಲ್ಲಿ 'ಧರ್ಮ'ವೆಂಬುದು ವ್ಯಕ್ತಿಯ ಅರಿವು, ಹೊಣೆಗಾರಿಕೆ ಮತ್ತು ಒಲವಿನಿಂದ ಕೂಡಿದ ಕರುಣೆಯ ನಡೆನುಡಿಯನ್ನು ತಳಹದಿಯನ್ನಾಗಿ ಹೊಂದಿರಬೇಕೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ದಯ+ಇಲ್ಲದ; ದಯ=ದಯೆ/ಕರುಣೆ/ಕನಿಕರ/ಮರುಕ/ಅನುಕಂಪ/ಇತರರ ಸಂಕಟವನ್ನು ಕಂಡು ಮರುಗಿ, ಅದನ್ನು ನಿವಾರಿಸಲು ನೆರವು ನೀಡುವುದು; ಇಲ್ಲ=ಯಾವುದೇ ಒಂದು ವಸ್ತು/ಜೀವಿ/ಸಂಗತಿಯು ಕಾಣದಿರುವುದು; ಧರ್ಮ+ಅದು+ಏವುದು+ಅಯ್ಯಾ; ಧರ್ಮ=ನಿಯಮ/ಆಚಾರ/ಸಂಪ್ರದಾಯ/ಕಟ್ಟುಪಾಡು/ಕಟ್ಟಳೆ;

ಏವುದು=ಯಾವುದು/ಏನು ಪ್ರಯೋಜನ; ಅಯ್ಯಾ=ಇತರರೊಡನೆ ಒಲವು ನಲಿವಿನಿಂದ ಮಾತನಾಡುವಾಗ ಬಳಸುವ ಪದ;

ದಯವಿಲ್ಲದ ಧರ್ಮವದೇವುದಯ್ಯಾ=ಕರುಣೆಯ ನಡೆನುಡಿಗಳನ್ನು ವ್ಯಕ್ತಿಯು ತನ್ನ ನಿತ್ಯ ಜೀವನದ ವ್ಯವಹಾರದಲ್ಲಿ ಅಳವಡಿಸಿಕೊಂಡು ಬಾಳದಿದ್ದರೆ/'ಧರ್ಮ'ದ ಹೆಸರಿನಲ್ಲಿ ಇತರ 'ಧರ್ಮ'ದವರನ್ನು ಕಡೆಗಣಿಸಿದರೆ/ಕ್ರೂರವಾಗಿ ಹಿಂಸಿಸಿದರೆ/ಸಾವು ನೋವುಗಳಿಗೆ ಗುರಿಮಾಡಿದರೆ ಅಂತಹ 'ಧರ್ಮ'ದಿಂದ ಏನು ತಾನೇ ಪ್ರಯೋಜನ/ಯಾವ ಬಗೆಯಲ್ಲಿ ಒಳ್ಳೆಯದಾಗುತ್ತದೆ;

ಬೇಕು=ಅಗತ್ಯ/ಅವಶ್ಯ ; ಸಕಲ+ಪ್ರಾಣಿ+ಗಳ್+ಎಲ್ಲರ್+ಅಲ್ಲಿ; ಸಕಲ=ಎಲ್ಲ/ಸಮಸ್ತ; ಪ್ರಾಣಿ=ಕ್ರಿಮಿಕೀಟಗಳು/ಜಂತುಗಳು/ಮಾನವರು; ಎಲ್ಲ=ಸಕಲ/ಸಮಸ್ತ/ಯಾವುದನ್ನು ಬಿಡದಂತೆ;

ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ=ಜಗತ್ತಿನಲ್ಲಿರುವ ಎಲ್ಲಾ ಜೀವರಾಶಿಗಳನ್ನು ಕರುಣೆಯಿಂದ ಕಾಣಬೇಕು/ಯಾವೊಂದು ಜೀವಿಯನ್ನು ನೋಯಿಸಬಾರದು/ಕೊಲ್ಲಬಾರದು;

ಮೂಲ+ಅಯ್ಯಾ; ಮೂಲ=ಹುಟ್ಟುವ ಜಾಗ/ಉಗಮದ ನೆಲೆ/ಆಕರ;

ದಯವೇ ಧರ್ಮದ ಮೂಲ=ಕರುಣೆಯ ನಡೆನುಡಿಯು 'ಧರ್ಮ'ದ ಅಡಿಪಾಯವಾಗಬೇಕು. ಕರುಣೆಯ ನಡೆನುಡಿ ಎಂದರೆ ಇತರರೊಡನೆ ತಾಳ್ಮೆಯಿಂದ ನಡೆದುಕೊಳ್ಳುವುದು/ಸಹಮಾನವನ ನೋವು-ಸಂಕಟ-ಹಸಿವು-ಅಪಮಾನ-ಬಡತನವನ್ನು ಕಂಡಾಗ, ಅದಕ್ಕಾಗಿ ಮರುಗಿ, ಅದನ್ನು ನಿವಾರಿಸುವುದಕ್ಕಾಗಿ ತನ್ನ ಕಯ್ಯಲ್ಲಾದ ನೆರವನ್ನು ನೀಡುವುದು.

ಕೂಡಲಸಂಗಯ್ಯನ್+ಅಂತು+ಅಲ್ಲದೆ+ಒಲ್ಲನ್+ಅಯ್ಯಾ; ಕೂಡಲಸಂಗಯ್ಯ= ಬಸವಣ್ಣನ ಮೆಚ್ಚಿನ ದೇವರು; ಅಂತು=ಆ ರೀತಿಯಲ್ಲಿ/ಆ ಬಗೆಯಲ್ಲಿ; ಅಂತಲ್ಲದೆ=ಆ ರೀತಿಯಲ್ಲಿ ಇರದಿದ್ದರೆ; ಒಲ್=ಮೆಚ್ಚು/ಒಪ್ಪು/ಬಯಸು/ಸಮ್ಮತಿಸು; ಒಲ್ಲನ್=ಮೆಚ್ಚುವುದಿಲ್ಲ/ ನಿರಾಕರಿಸುತ್ತಾನೆ ;

ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ=ದೇವರ ಮೆಚ್ಚುಗೆಗೆ ಪಾತ್ರನಾಗಬೇಕಾದರೆ ಮಾನವೀಯ ಗುಣಗಳಲ್ಲಿ ಬಹು ದೊಡ್ಡದು ಎನಿಸಿರುವ ಕರುಣೆಯ ನಡೆನುಡಿಗಳು ವ್ಯಕ್ತಿಯಲ್ಲಿ ಇರಬೇಕು ಎಂಬುದನ್ನು ಈ ನುಡಿಗಳು ಸೂಚಿಸುತ್ತಿವೆ.

ಜನರು ತಮ್ಮ ದಿನನಿತ್ಯದ ವ್ಯವಹಾರಗಳಲ್ಲಿ ಏನಾದರೂ ತಂಟೆ ತಕರಾರುಗಳು ಉಂಟಾದಾಗ "ಒಸಿ 'ಧರ್ಮ' ಕರ್ಮ ನೋಡಿ ಮಾತಾಡಪ್ಪ" ಎನ್ನುತ್ತಾರೆ. ಆಗ 'ಧರ್ಮ' ಎಂಬ ಪದ 'ಸರಿ/ನ್ಯಾಯ/ದಿಟ/ನೀತಿ' ಮತ್ತು ಕರ್ಮ ಎಂಬ ಪದ "ತಪ್ಪು/ಅನ್ಯಾಯ/ ಸುಳ್ಳು/ಅನೀತಿ" ಎಂಬ ತಿರುಳಿನಲ್ಲಿ ಬಳಕೆಗೊಳ್ಳುತ್ತವೆ.

ಆದರೆ ಜಗತ್ತಿನಲ್ಲಿರುವ ಮಾನವ ಸಮುದಾಯಗಳಲ್ಲಿ ಬೇರೆ ಬೇರೆ ಬಗೆಯ ಹೆಸರಿನ 'ಧರ್ಮ'ಗಳು ಆಚರಣೆಯಲ್ಲಿವೆ. ಇವು ಜನರು ಕಟ್ಟಿಕೊಂಡಿರುವ ಸಾಮಾಜಿಕ ಒಕ್ಕೂಟಗಳಾಗಿವೆ. ಪ್ರತಿಯೊಂದು 'ಧರ್ಮ'ವೂ ತನ್ನದೇ ಆದ ಸಂಪ್ರದಾಯ/ಆಚರಣೆ/ ಕಟ್ಟುಪಾಡುಗಳನ್ನು ಹೊಂದಿರುತ್ತದೆ. ಒಂದು 'ಧರ್ಮ'ದ ಸಮುದಾಯದಲ್ಲಿ ಹುಟ್ಟಿ ಬೆಳೆದ ಇಲ್ಲವೇ ಆ 'ಧರ್ಮ'ಕ್ಕೆ ಹೊಸದಾಗಿ ಸೇರಿದ ವ್ಯಕ್ತಿಯು ಯಾವ ದೇವರನ್ನು ಪೂಜಿಸಬೇಕು/ ಪೂಜಿಸಬಾರದು; ದೇವರನ್ನು ಪೂಜಿಸುವ ಆಚರಣೆಗಳು ಯಾವ ರೀತಿಯಲ್ಲಿರಬೇಕು/ ಇರಬಾರದು; ದೇಗುಲದೊಳಕ್ಕೆ ಯಾರು ಹೋಗಬೇಕು/ಹೋಗಬಾರದು; ಯಾವ ಬಗೆಯ ಉಣಿಸು ತಿನಸುಗಳನ್ನು ತಿನ್ನಬೇಕು/ತಿನ್ನಬಾರದು; ಯಾರೊಡನೆ ಕುಳಿತು ಉಣ್ಣಬೇಕು/ಉಣ್ಣಬಾರದು; ಯಾರೊಡನೆ ಮದುವೆಯಾಗಬೇಕು/ಮದುವೆ ಯಾಗಬಾರದು; ಯಾವ ಬಗೆಯ ಉಡುಗೆಗಳನ್ನು ತೊಡಬೇಕು/ತೊಡಬಾರದು; ಯಾವ ವ್ಯಕ್ತಿಯನ್ನು ಮುಟ್ಟಿಸಿಕೊಳ್ಳಬಹುದು/ಮುಟ್ಟಿಸಿಕೊಳ್ಳಬಾರದು; ಸತ್ತಾಗ ವ್ಯಕ್ತಿಯ ದೇಹವನ್ನು ಯಾವ ಮಸಣದಲ್ಲಿ ಸುಡಬೇಕು/ಸುಡಬಾರದು, ಹೂಳಬೇಕು/ಹೂಳಬಾರದು ಎಂಬೆಲ್ಲಾ ಕಟ್ಟುಪಾಡುಗಳಿರುತ್ತವೆ.

ಆಯಾ 'ಧರ್ಮ'ಕ್ಕೆ ಸೇರಿದ ವ್ಯಕ್ತಿಗಳು ತಂತಮ್ಮ 'ಧರ್ಮ'ದಲ್ಲಿರುವ ಸಂಪ್ರದಾಯಗಳನ್ನು ತಮ್ಮ ದಿನನಿತ್ಯದ ಬದುಕಿನ ಆಗುಹೋಗುಗಳಲ್ಲಿ/ವ್ಯವಹಾರಗಳಲ್ಲಿ ಕಡ್ಡಾಯವಾಗಿ ಪಾಲಿಸುತ್ತಿರಬೇಕೆಂಬ ಕಟ್ಟಳೆಯಿರುತ್ತದೆ. ತಮ್ಮ 'ಧರ್ಮ'ದ ಸಂಪ್ರದಾಯ/ಆಚರಣೆ/ನಿಯಮಗಳ ಎಲ್ಲೆಯನ್ನು ಮೀರಬಾರದೆಂಬ ಕಟ್ಟುಪಾಡುಗಳಿರುತ್ತವೆ. 'ಧರ್ಮ'ದ ಎಲ್ಲೆಯನ್ನು ದಾಟಿ ನಡೆದವರನ್ನು ಸಮುದಾಯದಿಂದ ಹೊರಹಾಕುವ/ದಂಡನೆಯನ್ನು ನೀಡುವ ಕಸುವನ್ನು ಆಯಾಯ 'ಧರ್ಮ'ದ ನೇತಾರರು ಹೊಂದಿರುತ್ತಾರೆ.

ಈ ರೀತಿ 'ಧರ್ಮ'ದ ನೆಲೆಯಲ್ಲಿ ಹುಟ್ಟಿ ಬೆಳೆದು, ಅದರಲ್ಲಿನ ಆಚಾರ ವಿಚಾರಗಳಿಗೆ ತಕ್ಕಂತೆ ಸಾಮಾಜಿಕ ವ್ಯಕ್ತಿತ್ವವನ್ನು ರೂಪಿಸಿಕೊಂಡಿರುವ ವ್ಯಕ್ತಿಗಳು ಸಮಾಜದಲ್ಲಿ ತಮ್ಮ ನೆರೆಹೊರೆಯಲ್ಲಿ ಬಾಳುತ್ತಿರುವ ಇತರ 'ಧರ್ಮ'ಗಳ ಜನರ ಬಗ್ಗೆ ಅಸಹನೆ/ಅಪನಂಬಿಕೆ/ಅಸೂಯೆ/ಹಗೆತನದ ಒಳಮಿಡಿತಗಳನ್ನು ಹೊಂದಿರುತ್ತಾರೆ. ಇದಕ್ಕೆ ಕಾರಣವೇನೆಂದರೆ ಇತರ 'ಧರ್ಮ'ದವರು ಹೊಂದಿರುವ ಆಸ್ತಿಪಾಸ್ತಿ/ಸಂಪತ್ತು/ರಾಜಕೀಯ ಗದ್ದುಗೆ/ಸಾಮಾಜಿಕ ಅಂತಸ್ತು.

ಪ್ರತಿಯೊಂದು 'ಧರ್ಮ'ದಲ್ಲಿಯೂ ಜಾತಿ/ಉಪಜಾತಿಗಳು/ಬಡವ ಬಲ್ಲಿದರೆಂಬ ವರ್ಗಗಳು ಇರುತ್ತವೆ. ಇವು ಒಂದಕ್ಕಿಂತ ಮತ್ತೊಂದು ಮೇಲು ಇಲ್ಲವೇ ಕೀಳು ಎಂಬ ಸಾಮಾಜಿಕ ಅಂತಸ್ತಿನ ಮೆಟ್ಟಿಲುಗಳಿಂದ ಕೂಡಿರುತ್ತವೆ. ಒಂದು 'ಧರ್ಮ'ಕ್ಕೆ ಸೇರಿದ ಜನಸಮುದಾಯದಲ್ಲಿಯೇ ಮೇಲು ಜಾತಿ/ಮೇಲು ವರ್ಗಕ್ಕೆ ಸೇರಿದ ಜನರು ಕೆಳಜಾತಿ/ಕೆಳ ವರ್ಗಕ್ಕೆ ಸೇರಿದ ಜನರ ಮೇಲೆ ಕ್ರೂರತನದಿಂದ ದಬ್ಬಾಳಿಕೆಯನ್ನು ನಡೆಸುವುದಲ್ಲದೆ, ಅವರನ್ನು ಕೀಳಾಗಿ ಕಾಣುತ್ತಾರೆ.

ಈ ರೀತಿ ಸಾಮಾಜಿಕ ಒಕ್ಕೂಟವಾಗಿ ರಚನೆಗೊಂಡಿರುವ 'ಧರ್ಮ' ಎನ್ನುವುದು ಜನಸಮುದಾಯಗಳನ್ನು ಬೇರೆ ಬೇರೆ ಗುಂಪುಗಳನ್ನಾಗಿ ವಿಂಗಡಿಸುವ, ಪರಸ್ಪರ ಒಂದರ ಎದುರಾಗಿ ಮತ್ತೊಂದನ್ನು ನಿಲ್ಲಿಸುವ/ಎತ್ತಿಕಟ್ಟುವ ಮತ್ತು ಇತರ 'ಧರ್ಮ'ದವರನ್ನು ಯಾವ ಹಿಂಜರಿಕೆಯೂ ಇಲ್ಲದೆ/ಆಡಳಿತದ ಕಾನೂನು ಕಟ್ಟಲೆಗಳನ್ನು ಲೆಕ್ಕಿಸದೆ 'ಧರ್ಮ'ದ ಹೆಸರಿನಲ್ಲಿ ಕೊಲೆ ಸುಲಿಗೆ ಮಾಡಲು ಬಳಸಿಕೊಳ್ಳುವ ಹರಿತವಾದ ಹತಾರವಾಗಿದೆ.

ಈ ಹಿನ್ನೆಲೆಯಿಂದ ನೋಡಿದಾಗ ಜಗತ್ತಿನ ಜನಸಮುದಾಯಗಳಲ್ಲಿ ಆಚರಣೆಯಲ್ಲಿರುವ ಬಹುಬಗೆಯ 'ಧರ್ಮ'ಗಳು ಜನರು ಪರಸ್ಪರ ಒಲವು ನಲಿವು ನೆಮ್ಮದಿಯಿಂದ ಜತೆಗೂಡಿ ಬಾಳುವುದಕ್ಕೆ ನೂರಾರು ಬಗೆಯ ಅಡೆತಡೆಗಳನ್ನು ಒಡ್ಡಿವೆ. ರಾಜ ಮಹಾರಾಜರು ಆಳುತ್ತಿದ್ದ ಕಾಲದಲ್ಲಿ ರಾಜ್ಯಗಳ ವಿಸ್ತರಣೆಗಾಗಿ ನಡೆದ ಕದನಗಳಲ್ಲಿ ಹರಿದ ಮಾನವ ರಕ್ತಕ್ಕಿಂತಲೂ 'ಧರ್ಮ'ದ ಹೆಸರಿನಲ್ಲಿ ನಡೆದ ಕೊಲೆ ಸುಲಿಗೆಯಲ್ಲಿ ಹರಿದ ನೆತ್ತರಿನ ಪ್ರಮಾಣವೇ ಹೆಚ್ಚು ಎಂಬುದು ಜಗತ್ತಿನ ಚರಿತ್ರೆಯ ಉದ್ದಕ್ಕೂ ಕಂಡುಬರುತ್ತದೆ.

ಆದ್ದರಿಂದ 'ಧರ್ಮ'ವೆಂಬುದು ಬಹಿರಂಗದಲ್ಲಿ ಮಾನವ ಸಮುದಾಯಗಳ ಜೀವನದ ಆಚರಣೆ/ಸಂಪ್ರದಾಯ/ಕಟ್ಟುಪಾಡುಗಳ ಪಾಲನೆಯಂತೆ ಕಂಡುಬಂದರೆ, ಅಂತರಂಗದಲ್ಲಿ ಮಾನವ ಸಮುದಾಯಗಳನ್ನು ನೂರಾರು ಬಗೆಯ ಸಾವು/ನೋವುಗಳಿಗೆ ಗುರಿಮಾಡುವ ಸಂಗತಿಗಳನ್ನು ಒಳಗೊಂಡಿದೆ. ಈ ಹಿನ್ನೆಲೆಯಲ್ಲಿ 'ಧರ್ಮ'ದ ಆಚರಣೆಯಲ್ಲಿ ಕರುಣೆಯ ನಡೆನುಡಿಗಳು ತುಂಬಾ ದೊಡ್ಡ ಪಾತ್ರವನ್ನು ವಹಿಸಬೇಕೆಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.)



೧೫)  ದೇವಲೋಕ ಮರ್ತ್ಯಲೋಕವೆಂಬುದು
ಬೇರಿಲ್ಲ ಕಾಣಿರೋ

ಸತ್ಯವ ನುಡಿವುದೆ ದೇವಲೋಕ
ಮಿಥ್ಯವ ನುಡಿವುದೇ ಮರ್ತ್ಯಲೋಕ

ಆಚಾರವೆ ಸ್ವರ್ಗ
ಅನಾಚಾರವೆ ನರಕ

ಕೂಡಲಸಂಗಮದೇವಾ
ನೀವೆ ಪ್ರಮಾಣು.

**ಅರಿವು, ಒಲವು, ನಲಿವುಗಳಿಂದ ಕೂಡಿದ ನೆಮ್ಮದಿಯ ಜೀವನಕ್ಕೆ ಇಲ್ಲವೇ ಕೋಪ ತಾಪ ಹತಾಶೆಗಳಿಂದ ಹದಗೆಟ್ಟ ಸಂಕಟದ ಜೀವನಕ್ಕೆ ವ್ಯಕ್ತಿಗಳ ನಡೆನುಡಿಗಳೇ ಕಾರಣ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ದೇವ=ದೇವತೆ/ದೇವರು/ಸುರ; ಲೋಕ=ಜಗತ್ತು/ಪ್ರಪಂಚ; ದೇವಲೋಕ= ಜನಮನದ ಕಲ್ಪನೆಯಲ್ಲಿ ರೂಪುಗೊಂಡಿರುವ ಒಂದು ಲೋಕ/ದೇವತೆಗಳು ನೆಲೆಸಿರುವ ಲೋಕ/ಜನಸಮುದಾಯದ ಮನದಲ್ಲಿ ತಾವು ವಾಸಮಾಡುತ್ತಿರುವ ಇಹಲೋಕದ ಮೇಲುಗಡೆಯಲ್ಲಿ ದೇವತೆಗಳು ನೆಲೆಸಿರುವ ದೇವಲೋಕ ಮತ್ತು ಕೆಳಗಡೆಯಲ್ಲಿ ನಾಗಸರ್ಪಗಳು ನೆಲೆಸಿರುವ ಪಾತಾಳಲೋಕವಿದೆ. ದೇವತೆಗಳು ಸಾವುನೋವುಗಳಿಲ್ಲದೆ ದೇವಲೋಕದಲ್ಲಿ ನೆಮ್ಮದಿಯಿಂದಿದ್ದಾರೆ ಎಂಬ ಕಲ್ಪನೆಯಿದೆ;

ಮರ್ತ್ಯಲೋಕ+ಎಂಬುದು; ಮರ್ತ್ಯ=ಮಾನವ/ಮನುಜ/ನರ; ಮರ್ತ್ಯಲೋಕ= 'ಭೂಲೋಕ'/ಮಾನವರು ಹುಟ್ಟಿ ಬೆಳೆದು ಬಾಳಿ ಸಾಯುತ್ತಿರುವ ಲೋಕ; ಎಂಬುದು= ಎನ್ನುವುದು; ಬೇರೆ+ಇಲ್ಲ; ಬೇರೆ=ಮತ್ತೊಂದು ರೀತಿಯಲ್ಲಿರುವುದು/ಬಗೆಯಲ್ಲಿರುವುದು; ಬೇರಿಲ್ಲ=ಮತ್ತೊಂದಿಲ್ಲ/ಇನ್ನೊಂದಿಲ್ಲ; ಕಾಣ್=ತಿಳಿ/ಅರಿ; ಕಾಣಿರೋ=ತಿಳಿದುಕೊಳ್ಳಿರಿ/ ಅರಿತುಕೊಳ್ಳಿರಿ/ಮನಗಾಣಿರಿ;

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ=ದೇವಲೋಕ ಮತ್ತು ಮರ್ತ್ಯಲೋಕವೆಂಬ ಎರಡು ಬೇರೆಬೇರೆಯಾಗಿರುವ ಲೋಕಗಳು ವಾಸ್ತವದಲ್ಲಿ ಇಲ್ಲ. ದೇವಲೋಕವೆಂಬುದು ಮಾನವರ ಮನದ ಕಲ್ಪನೆಯ ಲೋಕ. ಇರುವುದು ಒಂದೇ ಲೋಕ. ಅದು ಮರ್ತ್ಯಲೋಕ ಎಂಬುದನ್ನು ಮೊದಲು ಮನಗಾಣಿರಿ;

ಸತ್ಯ=ದಿಟ/ನಿಜ/ವಾಸ್ತವ/ಇರುವುದನ್ನು ಅದು ಇರುವಂತೆಯೇ ಕಾಣುವುದು/ ತಿಳಿಯುವುದು;ಸತ್ಯವ=ಸತ್ಯವನ್ನು; ನುಡಿ=ಹೇಳು/ಮಾತನಾಡು/ಉಚ್ಚರಿಸು; ನುಡಿವುದೆ=ಮಾತನಾಡುವುದೆ/ಹೇಳುವುದೆ; ಮಿಥ್ಯ=ಹುಸಿ/ಸುಳ್ಳು/ಇರುವುದನ್ನು ಇಲ್ಲವೆಂದು-ಇಲ್ಲದ್ದನ್ನು ಇದೆಯೆಂದು ತಿಳಿಯುವುದು; ಮಿಥ್ಯೆಯ=ಮಿಥ್ಯೆಯನ್ನು;

ಸತ್ಯವ ನುಡಿವುದೆ ದೇವಲೋಕ=ಒಳಿತನ್ನುಂಟು ಮಾಡುವ ಉದ್ದೇಶದಿಂದ ವ್ಯಕ್ತಿಗಳು ಸತ್ಯವನ್ನು ನುಡಿಯುವುದರಿಂದ ಸಮಾಜದಲ್ಲಿ ಎಲ್ಲ ವ್ಯಕ್ತಿಗಳಿಗೂ ಅಗತ್ಯವಾದ ಅನ್ನ/ಬಟ್ಟೆ/ವಸತಿ/ವಿದ್ಯೆ/ಉದ್ಯೋಗ/ಆರೋಗ್ಯ ದೊರಕುವಂತಾಗಿ, ನೆಮ್ಮದಿಯ ಬದುಕು ನೆಲೆಗೊಳ್ಳುತ್ತದೆ. 'ದೇವಲೋಕ' ಎಂಬ ಪದವನ್ನು ಒಲವು ನಲಿವು ನೆಮ್ಮದಿಯಿಂದ ತುಂಬಿದ ಬದುಕಿಗೆ ಒಂದು ರೂಪಕವಾಗಿ ಬಳಸಲಾಗಿದೆ;

ಮಿಥ್ಯವ ನುಡಿವುದೆ ಮರ್ತ್ಯಲೋಕ=ಕೇಡನ್ನು ಬಗೆಯಲೆಂದು ವ್ಯಕ್ತಿಗಳು ಸುಳ್ಳನ್ನಾಡಲು ತೊಡಗಿದಾಗ, ಜನಸಮುದಾಯದಲ್ಲಿ ವಂಚನೆ/ಕೊಲೆ/ಸುಲಿಗೆಗಳು ಹೆಚ್ಚಾಗಿ ಜನರ ಬದುಕು ಹಸಿವು/ಬಡತನ/ಅಪಮಾನದಿಂದ ಕೂಡಿ ಸಂಕಟಕ್ಕೆ ಗುರಿಯಾಗಿ ನರಳುತ್ತದೆ. 'ಮರ್ತ್ಯಲೋಕ' ಎಂಬ ಪದವನ್ನು ವಂಚನೆ/ಕ್ರೂರತನ/ಸಾವು/ನೋವುಗಳಿಗೆ ಒಂದು ರೂಪಕವಾಗಿ ಬಳಸಲಾಗಿದೆ;

ಆಚಾರ=ಒಳ್ಳೆಯ ನಡೆನುಡಿಗಳಿಂದ ಕೂಡಿದ ವರ್ತನೆ/ಒಳ್ಳೆಯ ನಡತೆ; ಅನಾಚಾರ=ಕೆಟ್ಟ ನಡೆನುಡಿಗಳಿಂದ ಕೂಡಿದ ವರ್ತನೆ/ಕೆಟ್ಟ ನಡತೆ;

ಸ್ವರ್ಗ--ನರಕ=ಮಾನವನ ಕಲ್ಪನೆಯಲ್ಲಿ ರೂಪುಗೊಂಡಿರುವ ಎರಡು ನೆಲೆಗಳು. ಸ್ವರ್ಗವು ನಲಿವಿನ ತಾಣ ಮತ್ತು ನರಕವು ನೋವಿನ ತಾಣವೆಂಬ ಕಲ್ಪನೆಯು ಜನಮನದಲ್ಲಿದೆ.

ಸ್ವರ್ಗವೆನ್ನುವುದು ಇಹಲೋಕದಲ್ಲಿ/ಈ ಲೋಕದಲ್ಲಿ ಜನರಿಗೆ ಒಳಿತನ್ನು ಮಾಡಿದ ವ್ಯಕ್ತಿಯು ಸತ್ತ ನಂತರ ಹೋಗಿ ನೆಲಸುವ ಜಾಗ. ಸ್ವರ್ಗಕ್ಕೆ ಹೋದ ವ್ಯಕ್ತಿಗಳಿಗೆ ಎಲ್ಲ ಬಗೆಯ ಆನಂದ ಮತ್ತು ನೆಮ್ಮದಿ ನಿರಂತರವಾಗಿ ದೊರೆಯುತ್ತದೆ ಎಂಬ ಕಲ್ಪನೆಯು ಜನಮನದಲ್ಲಿದೆ.

ನರಕವೆನ್ನುವುದು ಈ ಲೋಕದಲ್ಲಿ ಜನರಿಗೆ ಕೇಡನ್ನು ಬಗೆದು ಸಾವನ್ನಪ್ಪಿದ ವ್ಯಕ್ತಿಯು, ಅನಂತರ ತಾನು ಮಾಡಿದ ಕೆಟ್ಟ ಕೆಲಸಗಳಿಗೆ ತಕ್ಕಂತೆ ನಾನಾ ಬಗೆಯ ದಂಡನೆಗಳಿಗೆ ಗುರಿಯಾಗಿ ನರಳುವ ಜಾಗ.

ಸ್ವರ್ಗ ಎಂಬ ಪದವನ್ನು ಆನಂದ/ನೆಮ್ಮದಿ/ಒಲವು/ನಲಿವಿಗೆ ಒಂದು ರೂಪಕವಾಗಿ ಬಳಸಲಾಗಿದೆ;

'ನರಕ' ಎಂಬ ಪದವನ್ನು ಸಂಕಟ/ನೋವು/ಯಾತನೆ/ಕೋಪತಾಪಕ್ಕೆ ಒಂದು ರೂಪಕವಾಗಿ ಬಳಸಲಾಗಿದೆ;

ಆಚಾರವೆ ಸ್ವರ್ಗ=ಯಾವ ವ್ಯಕ್ತಿ/ವ್ಯಕ್ತಿಗಳು ಒಳ್ಳೆಯ ನಡೆನುಡಿಗಳಿಂದ ಬಾಳ್ವೆಯನ್ನು ನಡೆಸುತ್ತಾರೆಯೋ, ಅವರ ಜೀವನವು ಒಲವು, ನಲಿವು, ನೆಮ್ಮದಿಯಿಂದ ಕೂಡಿರುತ್ತದೆ;

ಅನಾಚಾರವೆ ನರಕ=ಯಾವ ವ್ಯಕ್ತಿ/ವ್ಯಕ್ತಿಗಳು ಕೆಟ್ಟ ನಡೆನುಡಿಗಳಿಂದ ಬಾಳ್ವೆಯನ್ನು ನಡೆಸುತ್ತಾರೆಯೋ, ಅವರ ಜೀವನವು ಸಾವು/ನೋವು/ಸಂಕಟ/ಒತ್ತಡ/ಅಪಮಾನದ ಬೇಗುದಿಯಲ್ಲಿ ಬೇಯುತ್ತದೆ;

ಕುಟುಂಬದ ನೆಲೆಯಲ್ಲಿ/ದುಡಿಮೆಯ ನೆಲೆಯಲ್ಲಿ/ಸಾರ್ವಜನಿಕ ನೆಲೆಯಲ್ಲಿ ಸಂಕಟ/ಅಪಮಾನ/ಸಾವು/ನೋವಿನ ಸನ್ನಿವೇಶಗಳು ಉಂಟಾದಾಗ ವ್ಯಕ್ತಿಯು ಕೆಲವೊಮ್ಮೆ ತನಗೆ ತಾನೇ ಇಲ್ಲವೇ ಇತರರೊಡನೆ ಮಾತನಾಡುವಾಗ "ನನ್ನ ಜೀವನವೇ ನರಕವಾಗಿದೆ-- ನಮ್ಮ ಮನೆಯೇ ನರಕವಾಗಿದೆ--ನಾನು ಕೆಲಸ ಮಾಡುವ ಜಾಗವೇ ನರಕವಾಗಿದೆ--ನಮ್ಮೂರೇ ನರಕವಾಗಿದೆ" ಎಂದು ಹೇಳುವುದನ್ನು ನಾವೆಲ್ಲರೂ ಕೇಳುತ್ತಿರುತ್ತೇವೆ. ಮಾನವ ಲೋಕದಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಬದುಕಿನ ಆಗುಹೋಗುಗಳು ಇತರ ವ್ಯಕ್ತಿಗಳ ನಡೆನುಡಿಯನ್ನು ಅವಲಂಬಿಸಿರುವುದರಿಂದ ಒಬ್ಬ ವ್ಯಕ್ತಿಯ ಕೆಟ್ಟ ನಡೆನುಡಿಯು ಅವನನ್ನು ಹಾಳುಮಾಡುವುದರ ಜತೆಜತೆಗೆ , ಅವನನ್ನು ಅವಲಂಬಿಸಿರುವ ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿಗಳನ್ನು ಬಲಿತೆಗೆದುಕೊಳ್ಳುತ್ತದೆ/ಸಮಾಜಕ್ಕೂ ಕೇಡನ್ನುಂಟುಮಾಡುತ್ತದೆ.

ಆದುದರಿಂದ ಜನರ ಬದುಕನ್ನು ಸ್ವರ್ಗದಂತೆ ಆನಂದಮಯವಾಗಿ ಅಂದಚಂದದಿಂದ ರೂಪಿಸುವ ಇಲ್ಲವೇ ನರಕದಂತೆ ಸಂಕಟಮಯವಾಗಿ ಹಾಳುಗೆಡಹುವ ಕ್ರಿಯೆಯು ವ್ಯಕ್ತಿಗಳ ಒಳಿತು/ಕೆಡುಕಿನ ನಡೆನುಡಿಯನ್ನು ಅವಲಂಬಿಸಿದೆ.

ಒಬ್ಬ ವ್ಯಕ್ತಿಯ ಜೀವನದಲ್ಲಿನ ಏಳುಬೀಳುಗಳಿಂದ ತೊಡಗಿ ಒಂದು ಕುಟುಂಬ/ಒಂದು ಸಮಾಜ/ಒಂದು ದೇಶ/ಒಟ್ಟಾರೆಯಾಗಿ ಮಾನವ ಜಗತ್ತಿನ ಆಗುಹೋಗುಗಳಿಗೆ "ಆಚಾರವೆ ಸ್ವರ್ಗ ಅನಾಚಾರವೇ ನರಕ" ಎಂಬ ಈ ನುಡಿಗಳು ಅನ್ವಯವಾಗುತ್ತವೆ;

ಕೂಡಲಸಂಗಮದೇವಾ=ಬಸವಣ್ಣನ ಮೆಚ್ಚಿನ ದೇವರು; ನೀವೆ=ದೇವರಾದ ನೀವು ; ಪ್ರಮಾಣು=ಒರೆಹಚ್ಚಿ ನೋಡುವುದು/ಸರಿ ತಪ್ಪುಗಳನ್ನು ಅಳೆದು ನೋಡುವುದು/ಕಾರ್ಯ ಕಾರಣಗಳನ್ನು ತಿಳಿಯುವುದು;

ಕೂಡಲಸಂಗಮದೇವಾ ನೀವೆ ಪ್ರಮಾಣು=ವ್ಯಕ್ತಿಗಳ ನಡೆನುಡಿಗಳನ್ನು ಸದಾಕಾಲ ಕೂಡಲಸಂಗಮನು ಒರೆಹಚ್ಚಿ ನೋಡುತ್ತಿರುತ್ತಾನೆ ಎಂಬ ನಂಬಿಕೆಯಿಂದ ಕೂಡಿದ್ದ ಶಿವಶರಣಶರಣೆಯರು ಜೀವನದ ಉದ್ದಕ್ಕೂ ಒಳಿತಿನ ನಡೆನುಡಿಗಳಿಂದ ಬಾಳಬೇಕೆಂಬ ಎಚ್ಚರವನ್ನು ಹೊಂದಿದ್ದರು.)



೧೬) ನಾನೊಂದ ನೆನೆದಡೆ
ತಾನೊಂದ ನೆನೆವುದು

ನಾನಿತ್ತಲೆಳದಡೆ
ತಾನತ್ತಲೆಳುವುದು

ತಾ ಬೇರೆ ಎನ್ನನಳಲಿಸಿ ಕಾಡಿತ್ತು
ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು

ಕೂಡಲಸಂಗನ ಕೂಡಿಹೆನೆಂದಡೆ
ತಾನೆನ್ನ ಮುಂದುಗೆಡೆಸಿತ್ತು ಮಾಯೆ.

**ತನ್ನ ಮನದೊಳಗೆ ತುಡಿಯುತ್ತಿರುವ ಒಳಿತು ಕೆಡುಕಿನ ಆಸೆಗಳ ನಡುವೆ ಸಿಲುಕಿ ಕಂಗಾಲಾಗಿರುವ ವ್ಯಕ್ತಿಯು, ಕೆಟ್ಟ ಆಸೆಯಿಂದ ಕೂಡಿರುವ ಒಳಮಿಡಿತಗಳನ್ನು ಹತ್ತಿಕ್ಕಿಕೊಂಡು, ಒಳ್ಳೆಯ ನಡೆನುಡಿಗಳನ್ನು ಅಳವಡಿಸಿಕೊಂಡು ಬಾಳಲು ಹಂಬಲಿಸುತ್ತಿರುವುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ನಾನ್+ಒಂದ; ನಾನ್=ವ್ಯಕ್ತಿಯು; ಒಂದ=ಒಂದು ಸಂಗತಿಯನ್ನು/ವಿಚಾರವನ್ನು; ನೆನೆ=ಆಲೋಚಿಸು/ಚಿಂತಿಸು/ಬಯಸು/ಸಂಕಲ್ಪಿಸು/ಮನಸ್ಸಿಗೆ ತಂದುಕೊಳ್ಳುವುದು; ನೆನೆದಡೆ=ನೆನೆಸಿಕೊಂಡರೆ/ಮಾಡಬೇಕೆಂದು ಬಯಸಿದರೆ; ತಾನ್+ಒಂದ; ತಾನ್=ವ್ಯಕ್ತಿಯ ಮನದಲ್ಲಿಯೇ ಮತ್ತೊಂದು ಬಗೆಯ ಆಲೋಚನೆ/ಬಯಕೆ; ನೆನೆವುದು=ಮೂಡುವುದು/ಉಂಟಾಗುವುದು/ಬರುವುದು;

ನಾನೊಂದ ನೆನೆದಡೆ ತಾನೊಂದ ನೆನೆವುದು=ಯಾವುದೇ ಒಂದು ಕೆಲಸದಲ್ಲಿ ತೊಡಕು ಉಂಟಾದಾಗ ವ್ಯಕ್ತಿಯ ಮನಸ್ಸು ಇಬ್ಬಗೆಯ ತೊಳಲಾಟಕ್ಕೆ ಗುರಿಯಾಗುತ್ತದೆ/ಹಾಗೆ ಮಾಡಿದರೆ ಸರಿ ಎಂದು ಒಂದು ಮನಸ್ಸು ಹೇಳಿದರೆ, ಹಾಗೆ ಮಾಡುವುದು ಸರಿಯಲ್ಲವೆಂದು ಮತ್ತೊಂದು ಮನಸ್ಸು ಎದುರಾಗುತ್ತದೆ;

ನಾನ್+ಇತ್ತಲ್+ಎಳೆದಡೆ; ಇತ್ತ=ಈ ಕಡೆ/ಈ ಪಕ್ಕ/ಈ ದಿಕ್ಕು; ಇತ್ತಲ್=ಈ ಕಡೆಗೆ/ಈ ಪಕ್ಕಕ್ಕೆ; ಎಳೆ=ಸೆಳೆಯುವುದು/ಜಗ್ಗುವುದು; ಎಳೆದಡೆ=ಸೆಳೆದರೆ/ಜಗ್ಗಿದರೆ; ತಾನ್+ಅತ್ತಲ್+ಎಳೆವುದು; ಅತ್ತ=ಆ ಕಡೆ/ಆ ಪಕ್ಕ/ಆ ದಿಕ್ಕು; ಅತ್ತಲ್=ಆ ಕಡೆಗೆ/ಆ ಪಕ್ಕಕ್ಕೆ/ ಆ ದಿಕ್ಕಿಗೆ; ಎಳೆವುದು=ಎಳೆಯುತ್ತದೆ;

ನಾನಿತ್ತಲೆಳದಡೆ ತಾನತ್ತಲೆಳುವುದು=ಮನದಲ್ಲಿ ಉಂಟಾದ ಇಬ್ಬಗೆಯ ತುಯ್ದಾಡುವಿಕೆಯು ವ್ಯಕ್ತಿಯನ್ನು ಒಳಿತು ಕೆಡುಕಿನ ಗೊಂದಲಕ್ಕೆ ಗುರಿಮಾಡಿ, ಏನೊಂದನ್ನು ಮಾಡಲಾಗದೆ ಮಿಲಮಿಲನೆ ಒದ್ದಾಡುವಂತೆ ಮಾಡುತ್ತದೆ;

ತಾ=ಮನದಲ್ಲಿನ ಮತ್ತೊಂದು ಬಗೆಯ ಚಿಂತನೆ/ಆಲೋಚನೆ/ಬಯಕೆ; ಬೇರೆ=ಜತೆಗೆ/ಕೂಡ; ಎನ್ನನ್+ಅಳಲಿಸಿ; ಎನ್ನನ್ನು=ನನ್ನನ್ನು; ಅಳಲು=ಸಂಕಟ/ಶೋಕ/ವೇದನೆ/ನೋವು/ಯಾತನೆ; ಅಳಲಿಸಿ=ಸಂಕಟಕ್ಕೆ ಗುರಿ ಮಾಡಿ; ಕಾಡು+ಇತ್ತು; ಕಾಡು=ಹಿಂಸಿಸು/ಪೀಡಿಸು/ನೋಯಿಸು; ಇತ್ತು=ಇರುವುದು/ಇದೆ; ಕಾಡಿತ್ತು=ನೋಯಿಸುತ್ತಿದೆ/ಪೀಡಿಸುತ್ತಿದೆ; ಎನ್ನ=ನನ್ನನ್ನು; ಬಳಲು=ದಣಿಯುವುದು/ಆಯಾಸಗೊಳ್ಳುವುದು/ಮಯ್ ಮನಗಳ ಕಸುವು ಕುಗ್ಗುವುದು; ಬಳಲಿಸಿ=ಕುಗ್ಗುವಂತೆ ಮಾಡಿ/ದಣಿಯುವಂತೆ ಮಾಡಿ/ಕುಸಿಯುವಂತೆ ಮಾಡಿ;

ತಾ ಬೇರೆ ಎನ್ನನಳಲಿಸಿ ಕಾಡಿತ್ತು ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು=ಮನದಲ್ಲಿ ಉಂಟಾದ ಇಬ್ಬಗೆಯ ತಾಕಲಾಟದಲ್ಲಿ ಏನನ್ನು ಮಾಡಬೇಕು/ಏನನ್ನು ಮಾಡಬಾರದು ಎಂಬುದನ್ನು ನಿರ್ಣಯಿಸಲಾಗದೆ ವ್ಯಕ್ತಿಯು ಮಾನಸಿಕ ಒತ್ತಡಕ್ಕೆ/ಬಿಕ್ಕಟ್ಟಿಗೆ/ಸಂಕಟಕ್ಕೆ ಗುರಿಯಾಗಿ ನರಳತೊಡಗುತ್ತಾನೆ;

ಕೂಡಲಸಂಗ=ಬಸವಣ್ಣನ ಮೆಚ್ಚಿನ ದೇವರು;ಕೂಡಿ+ಇಹೆನ್+ಎಂದಡೆ; ಕೂಡಿ=ಸೇರಿ/ಜತೆಯಾಗಿ; ಇಹೆನ್=ಇರುವೆನು; ಎಂದಡೆ=ಎಂದುಕೊಂಡರೆ;

ಕೂಡಲಸಂಗನ ಕೂಡಿಹೆನೆಂದಡೆ=ಜೀವನದಲ್ಲಿ ಒಳ್ಳೆಯ ನಡೆನುಡಿಗಳಿಂದ ಬಾಳುವುದರ ಮೂಲಕ ಕೂಡಲಸಂಗನ ಜತೆಗೂಡಬೇಕೆಂದು ಬಯಸಿದರೆ;

ತಾನ್+ಎನ್ನ; ಮುಂದು+ಕೆಡಿಸಿ+ಇತ್ತು; ಮುಂದು=ಎದುರಿನಲ್ಲಿರುವುದು; ಕೆಡು=ಇಲ್ಲವಾಗು/ನಾಶವಾಗು/ಹದಗೆಡು; ಇತ್ತು=ಇರುವುದು/ಇದೆ; ಮುಂದುಗೆಡಿಸಿತ್ತು=ಮುಂದಿನ ದಾರಿಯೇ ಕಾಣದಂತೆ ಮಾಡಿದೆ/ಮುಂದಿನ ದಿಕ್ಕನ್ನು ಕಾಣದಂತೆ ಮಾಡಿದೆ/ಏನನ್ನು ಮಾಡಬೇಕೆಂದು ತೋಚದೆ ಕಂಗಾಲಾಗುವಂತೆ ಮಾಡಿದೆ; ಮಾಯೆ=ವ್ಯಕ್ತಿಯ ಮಯ್ ಮನದಲ್ಲಿ ಆಸೆಯನ್ನು ಕೆರಳಿಸಿ ತಮ್ಮತ್ತ ಸೆಳೆಯುವ ವಸ್ತು/ಜೀವಿ/ವ್ಯಕ್ತಿಗಳು;

ತಾನೆನ್ನ ಮುಂದುಗೆಡಿಸಿತ್ತು ಮಾಯೆ=ಮಯ್ ಮನದಲ್ಲಿ ಬಹುಬಗೆಯ ಕೆಟ್ಟ ಆಸೆಗಳನ್ನು ಮೂಡಿಸುವ ವಸ್ತು/ಜೀವಿ/ಸಂಗತಿಗಳು ವ್ಯಕ್ತಿಯ ನಡೆನುಡಿಯಲ್ಲಿ

ಏರುಪೇರುಗಳನ್ನು ಉಂಟುಮಾಡುತ್ತ, ವ್ಯಕ್ತಿಯ ಬದುಕನ್ನು ಸರಿಯಾದ ಹಾದಿಯಲ್ಲಿ ಸಾಗದಂತೆ ಮಾಡಿವೆ;

**ಆಸೆಯಲ್ಲಿ ಎರಡು ಬಗೆಗಳಿವೆ.**

೧) ಒಳ್ಳೆಯ ಆಸೆ=ಇತರರಿಗೆ ಹಾನಿಯನ್ನುಂಟಾಗದ ರೀತಿಯಲ್ಲಿ ತನ್ನ ಮನದ ಬಯಕೆಯನ್ನು ಈಡೇರಿಸಿಕೊಳ್ಳುವುದು.

೨) ಕೆಟ್ಟ ಆಸೆ= ತನ್ನ ಬಯಕೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ಇತರರಿಗೆ ಹಾನಿ/ಸಾವು/ನೋವು/ಸಂಕಟವನ್ನುಂಟುಮಾಡುವುದು.



೧೭) ನುಡಿದಡೆ ಮುತ್ತಿನ ಹಾರದಂತಿರಬೇಕು
ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು

ನುಡಿದಡೆ
ಲಿಂಗ ಮೆಚ್ಚಿ ಅಹುದಹುದೆನಬೇಕು

ನುಡಿಯೊಳಗಾಗಿ ನಡೆಯದಿದ್ದಡೆ
ಕೂಡಲಸಂಗಮದೇವನೆಂತೊಲಿವನಯ್ಯಾ.

**ವ್ಯಕ್ತಿಯು ಆಡುವ ಮಾತು ಕೇಳುಗರ ಮನಕ್ಕೆ ಅರಿವು ಮತ್ತು ಆನಂದವನ್ನು ನೀಡುವಂತಿದ್ದು, ವ್ಯಕ್ತಿಗಳ ನಡುವಣ ನಂಟನ್ನು ಪರಸ್ಪರ ಒಲವು ನಲಿವಿನಿಂದ ಬೆಸೆದು, ಎಲ್ಲರೂ ಜತೆಗೂಡಿ ನೆಮ್ಮದಿಯಿಂದ ಬಾಳುವುದಕ್ಕೆ ನೆರವಾಗುವಂತಿರಬೇಕು ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ನುಡಿ=ಮಾತು/ಸೊಲ್ಲು; ನುಡಿದಡೆ=ಮಾತನಾಡಿದರೆ/ಏನನ್ನಾದರೂ ಹೇಳಿದರೆ; ಮುತ್ತು=ದುಂಡನೆಯ ಆಕಾರವುಳ್ಳ ಒಂದು ಬಗೆಯ ವಸ್ತು/ನವರತ್ನಗಳಲ್ಲಿ ಒಂದು ಬಗೆಯದು;

"ವಜ್ರ/ವೈಡೂರ್ಯ/ಗೋಮೇಧಿಕ/ಪುಷ್ಯರಾಗ/ನೀಲ/ಮರಕತ/ಮಾಣಿಕ್ಯ/ಹವಳ/ಮುತ್ತು" ಎಂಬ ಒಂಬತ್ತು ಬಗೆಯ ವಸ್ತುಗಳನ್ನು ನವರತ್ನಗಳೆಂದು ಕರೆಯುತ್ತಾರೆ; ಹಾರ+ಅಂತೆ+ಇರಬೇಕು; ಹಾರ=ಮಾಲೆ/ಸರ; ಅಂತೆ=ಹಾಗೆ/ಆ ರೀತಿಯಲ್ಲಿ/ಆ ಬಗೆಯಲ್ಲಿ; ಮುತ್ತಿನ ಹಾರ=ಬಿಡಿ ಬಿಡಿ ಮುತ್ತುಗಳನ್ನು ದಾರದ ಎಳೆ ಇಲ್ಲವೇ ಚಿನ್ನ ಬೆಳ್ಳಿ ಮುಂತಾದ ಲೋಹದ ತಂತಿಗೆ ಪೋಣಿಸಿ ಕಟ್ಟಿರುವ ಮಾಲೆ/ಸರ;

ಮಾಣಿಕ್ಯ=ಕೆಂಪು ಹರಳು/ಕೆಂಪು ಬಣ್ಣದ ರತ್ನ/ನವರತ್ನಗಳಲ್ಲಿ ಒಂದು; ದೀಪ್ತಿ+ಅಂತೆ+ಇರಬೇಕು; ದೀಪ್ತಿ=ಬೆಳಕು/ಕಾಂತಿ/ಕಿರಣ/ರಶ್ಮಿ; ಮಾಣಿಕ್ಯದ ದೀಪ್ತಿ=ಮಾಣಿಕ್ಯದ ಕಾಂತಿ;

ಸ್ಫಟಿಕ=ಬಿಳಿಯ ಬಣ್ಣದ ಕಾಂತಿಯಿಂದ/ಕಿರಣಗಳಿಂದ/ಹೊಳಪಿನಿಂದ ಕೂಡಿರುವ ಒಂದು ಬಗೆಯ ಹರಳು; ಸಲಾಕೆ+ಅಂತೆ+ಇರಬೇಕು; ಸಲಾಕೆ=ಸರಳು/ಈಟಿ/ಒಂದು ತುದಿಯಲ್ಲಿ ಮೊನೆಯುಳ್ಳ ಹತಾರ; ಸ್ಫಟಿಕದ ಸಲಾಕೆ=ಹರಳಿನಿಂದ ಹೊರಹೊಮ್ಮುತ್ತಿರುವ ಕಿರಣಗಳು ಮೊನೆಯುಳ್ಳ ಹತಾರದಂತೆ ನೋಡುವ ಕಣ್ಣುಗಳಿಗೆ ಕೋರಯಿಸುತ್ತಿರುತ್ತವೆ;

"ಮುತ್ತಿನ ಹಾರ/ಮಾಣಿಕ್ಯದ ದೀಪ್ತಿ/ಸ್ಫಟಿಕದ ಸಲಾಕೆ" – ಈ ಮೂರು ವಸ್ತುಗಳು ಉಪಮೆಗಳಾಗಿ ಬಳಕೆಯಾಗಿವೆ. ಉಪಮೆ ಎಂದರೆ ಹೋಲಿಕೆ. ಕವಿಯು ತಾನು ಹೇಳಬೇಕಾದ ಸಂಗತಿಯನ್ನು ಓದುಗರಿಗೆ/ಕೇಳುಗರಿಗೆ ಚೆನ್ನಾಗಿ ಮನದಟ್ಟು ಮಾಡಲೆಂದು ಮತ್ತೊಂದು ವಸ್ತು/ಪ್ರಸಂಗದೊಡನೆ ಹೋಲಿಸುವುದನ್ನು ಉಪಮೆಯೆಂದು ಕರೆಯುತ್ತಾರೆ.

ನುಡಿದಡೆ ಮುತ್ತಿನ ಹಾರದಂತಿರಬೇಕು--ಮಾಣಿಕ್ಯದ ದೀಪ್ತಿಯಂತಿರಬೇಕು--ಸ್ಫಟಿಕದ ಸಲಾಕೆಯಂತಿರಬೇಕು=ಮುತ್ತಿನ ಹಾರದ ಸೊಗಸು--ಮಾಣಿಕ್ಯದ ಕಾಂತಿ--ಸ್ಫಟಿಕದ ಕಿರಣಗಳು ನೋಡುವವರ ಕಣ್ಮನಗಳನ್ನು ತಣಿಸುತ್ತವೆ ಮತ್ತು ಅವನ್ನು ಒಡವೆಯನ್ನಾಗಿ ತೊಟ್ಟಿರುವ ವ್ಯಕ್ತಿಗಳ ಅಂದಚೆಂದವನ್ನು ಇಮ್ಮಡಿಗೊಳಿಸಿ ಕಂಗೊಳಿಸುವಂತೆ ಮಾಡುತ್ತವೆ. ಈ ಮೂರು ಬಗೆಯ ವಸ್ತುಗಳ ಚೆಲುವಿನಂತೆಯೇ ವ್ಯಕ್ತಿಯು ಆಡುವ ಮಾತುಗಳು ಆಡಿದವನಿಗೂ ಮತ್ತು ಕೇಳಿದವರಿಗೂ ಅರಿವು/ಆನಂದವನ್ನು ನೀಡಿ ಒಳಿತನ್ನುಂಟುಮಾಡುವಂತಿರಬೇಕು.

ಲಿಂಗ=ಈಶ್ವರ/ಶಿವಶರಣಶರಣೆಯರು ಒಳ್ಳೆಯ ನಡೆನುಡಿಗಳ ಆಚರಣೆಯಲ್ಲಿ ದೇವರನ್ನು ಕಾಣುತ್ತಿದ್ದರು; ಮೆಚ್ಚು=ಒಪ್ಪು/ಸಮ್ಮತಿಸು/ಹೊಗಳು/ಕೊಂಡಾಡು/ಒಲಿ; ಅಹುದು+ಅಹುದು+ಎನಬೇಕು; ಅಹುದು=ಯಾವುದೇ ಒಂದು ಸಂಗತಿಯನ್ನು/ವಿಚಾರವನ್ನು ಸರಿಯಾಗಿದೆ ಎಂದು ಒಪ್ಪಿಗೆಯನ್ನು ಸೂಚಿಸುವುದು; ಎನಬೇಕು=ಎಂದು ಹೇಳಬೇಕು/ನುಡಿಯಬೇಕು ;

ನುಡಿದಡೆ ಲಿಂಗ ಮೆಚ್ಚಿ ಅಹುದಹುದೆನಬೇಕು=ವ್ಯಕ್ತಿಯು ಆಡುವ ನುಡಿಗಳು ತನಗೆ ಒಳಿತನ್ನು ಉಂಟುಮಾಡುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಿರಬೇಕು. ಬೇರೆ ಬೇರೆ ಮತ/ಜನಾಂಗ/ಜಾತಿ ಸಮುದಾಯಗಳಿಂದ ಕೂಡಿರುವ ಸಮಾಜದಲ್ಲಿ ಎಲ್ಲರೊಡನೆ ಹೊಂದಿಕೊಂಡು ಬಾಳುವಂತಹ ಒಲವು ನಲಿವಿನಿಂದ ಕೂಡಿದ ಒಳ್ಳೆಯ ಮಾತುಗಳನ್ನಾಡಬೇಕು. ಆಡುವ ಮಾತುಗಳು ಕೇಳುಗರ ಮನಸ್ಸನ್ನು ಗಾಸಿಗೊಳಿಸುವಂತೆ ಇಲ್ಲವೇ ಇತರರ ವ್ಯಕ್ತಿತ್ವವನ್ನು ಅಲ್ಲಗಳೆಯುವಂತೆ ಇರಬಾರದು ಎಂಬ ಎಚ್ಚರವನ್ನು/ಅರಿವನ್ನು ವ್ಯಕ್ತಿಯು ಹೊಂದಿರಬೇಕು. ಆಗ ವ್ಯಕ್ತಿಯು ಆಡಿದ ಮಾತುಗಳಿಗೆ ಒಂದು ಬೆಲೆ ಬರುತ್ತದೆ ಎಂಬ ತಿರುಳಿನಲ್ಲಿ ಈ ವಾಕ್ಯ ಬಳಕೆಯಾಗಿದೆ.

ದಿನನಿತ್ಯದ ಮಾತುಕತೆಗಳಲ್ಲಿ ಯಾರಾದರೂ ಒಂದು ಕೆಟ್ಟ ಮಾತನ್ನಾಡಿದಾಗ "ಹೀಗೆಲ್ಲಾ ಮಾತನಾಡಬೇಡ. ನಾಲ್ಕು ಜನ ಮೆಚ್ಚುವಂತಹ/ದೇವರು ಒಪ್ಪುವಂತಹ ಮಾತನ್ನಾಡು" ಎಂದು ಎಚ್ಚರಿಕೆಯನ್ನು ನೀಡುವ ಪ್ರಸಂಗಗಳು ಕನ್ನಡ ನುಡಿಸಮುದಾಯದಲ್ಲಿ ಕಂಡುಬರುತ್ತವೆ;

ನುಡಿ+ಒಳಗೆ+ಆಗಿ; ಒಳಗೆ=ಸೇರಿಕೊಂಡು/ಆವರಿಸಿಕೊಂಡು; ನಡೆಯದೆ+ಇದ್ದಡೆ; ನಡೆ=ನಡವಳಿಕೆ/ಆಚರಣೆ/ವರ್ತನೆ; ನಡೆಯದೆ=ಆಚರಿಸದೆ/ವರ್ತಿಸದೆ/ಮಾಡದೆ; ಇದ್ದಡೆ=ಇದ್ದರೆ ;

ನುಡಿಯೊಳಗಾಗಿ ನಡೆಯದಿದ್ದಡೆ=ವ್ಯಕ್ತಿಯ ತಾನು ಆಡುವ ಸತ್ಯ, ನೀತಿ, ನ್ಯಾಯದ ನುಡಿಗಳಿಗೆ ತಕ್ಕಂತೆ ತನ್ನ ಜೀವನದಲ್ಲಿ ಒಳ್ಳೆಯ ಕೆಲಸಗಳನ್ನು ಮಾಡದಿದ್ದರೆ/ಆಡುವುದೇ ಒಂದು ಮಾಡುವುದೇ ಮತ್ತೊಂದಾದರೆ;

ಕೂಡಲಸಂಗಮದೇವನ್+ಎಂತು+ಒಲಿವನ್+ಅಯ್ಯಾ; ಕೂಡಲಸಂಗಮದೇವ= ಬಸವಣ್ಣನ ಮೆಚ್ಚಿನ ದೇವರು; ಎಂತು=ಯಾವ ರೀತಿಯಲ್ಲಿ/ಯಾವ ಬಗೆಯಲ್ಲಿ ; ಒಲಿ=ಒಪ್ಪು/ಸಮ್ಮತಿಸು/ಅಂಗೀಕರಿಸು/ಮೆಚ್ಚು; ಒಲಿವನ್=ಮೆಚ್ಚುವನು/ಒಪ್ಪುವನು;

ನುಡಿಯೊಳಗಾಗಿ ನಡೆಯದಿದ್ದಡೆ ಕೂಡಲಸಂಗಮದೇವನೆಂತೊಲಿವನಯ್ಯಾ= ಒಳ್ಳೆಯ ನುಡಿಗಳನ್ನಾಡುವಂತೆಯೇ ಒಳ್ಳೆಯ ಕೆಲಸಗಳನ್ನು ಮಾಡದಿದ್ದರೆ, ಅಂತಹ ವ್ಯಕ್ತಿಯನ್ನು ದೇವರು ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ದೇವರನ್ನು ಒಲಿಸಿಕೊಳ್ಳಲು ಮಾಡುವ ಎಲ್ಲಾ ಬಗೆಯ ಪೂಜೆ/ಆಚರಣೆ/ವ್ರತಗಳಿಗಿಂತಲೂ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಗಳೇ ದೊಡ್ಡದು ಎಂಬ ನಂಬಿಕೆಯನ್ನು/ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು.



೧೮)  ನೂರನೋದಿ ನೂರ ಕೇಳಿ ಏನು
ಆಸೆ ಬಿಡದು ರೋಷ ಪರಿಯದು

ಮಜ್ಜನಕ್ಕೆರೆದು ಫಲವೇನು

ಮಾತಿನಂತೆ ಮನವಿಲ್ಲದ
ಜಾತಿ ಡಂಬರ ನೋಡಿ
ನಗುವ ನಮ್ಮ ಕೂಡಲಸಂಗಮದೇವ.

**ತನ್ನ ಮಯ್ ಮನವನ್ನು ಹತೋಟಿಯಲ್ಲಿಟ್ಟುಕೊಳ್ಳದ ಮತ್ತು ಮನದಲ್ಲಿ ಒಳ್ಳೆಯ ಉದ್ದೇಶವನ್ನು ಹೊಂದಿರದ ವ್ಯಕ್ತಿಯು ಕಲಿಯುವ ಅಕ್ಕರದ ವಿದ್ಯೆಯಿಂದ/ಆಡುವ ಮಾತಿನಿಂದ/ಮಾಡುವ ಆಚರಣೆಯಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಯಾವುದೇ ಪ್ರಯೋಜನವಿಲ್ಲವೆಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ನೂರ್+ಅನ್+ಓದಿ; ನೂರು=ಅಂಕಿಯನ್ನು ಸೂಚಿಸುವ ಪದ/ಹತ್ತನ್ನು ಹತ್ತರಿಂದ ಗುಣಿಸಿದಾಗ ಬರುವ ಮೊತ್ತ; ಅನ್=ಅನ್ನು; ಓದು=ಲಿಪಿರೂಪದಲ್ಲಿರುವ ಬರಹದಲ್ಲಿನ ಸಂಗತಿಗಳನ್ನು ಕಣ್ಣಿನ ಮೂಲಕ ನೋಡಿ ತಿಳಿದುಕೊಳ್ಳುವುದು; ನೂರ=ನೂರನ್ನು; ಕೇಳು=ಆಲಿಸು/ಇತರರು ಆಡುವ ಮಾತುಗಳನ್ನು ಕಿವಿಯ ಮೂಲಕ ಆಲಿಸಿ ಗ್ರಹಿಸಿಕೊಳ್ಳುವುದು; ಏನು=ಯಾವುದು;

ನೂರನೋದಿ=ವಿಚಾರಗಳನ್ನು/ಸಂಗತಿಗಳನ್ನು ತಿಳಿಸುವಂತಹ ನೂರಾರು ಬಗೆಯ/ಹಲವು ರೀತಿಯ ಬರಹಗಳನ್ನು ಓದುವುದರಿಂದ ಬರುವ ತಿಳುವಳಿಕೆ/ಪಾಂಡಿತ್ಯ;

ನೂರ ಕೇಳಿ=ಸತ್ಯ/ನೀತಿ/ನ್ಯಾಯದ ನಡೆನುಡಿಗಳನ್ನು ಕುರಿತು ಗುರುಹಿರಿಯರು ಆಡುತ್ತಿರುವ ಹಲವು ರೀತಿಯ ಮಾತುಗಳನ್ನು ಕೇಳುವುದರಿಂದ ಬರುವ ತಿಳುವಳಿಕೆ; ಆಸೆ=ಬಯಕೆ/ಹಂಬಲ;

ಆಸೆಯಲ್ಲಿ ಎರಡು ಬಗೆಗಳಿವೆ.

೧) ಒಳ್ಳೆಯ ಆಸೆ=ಇತರರಿಗೆ ಹಾನಿಯನ್ನುಂಟಾಗದ ರೀತಿಯಲ್ಲಿ ತನ್ನ ಮನದ ಬಯಕೆಯನ್ನು ಈಡೇರಿಸಿಕೊಳ್ಳುವುದು.

೨) ಕೆಟ್ಟ ಆಸೆ= ತನ್ನ ಬಯಕೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ಇತರರಿಗೆ ಹಾನಿ/ಸಾವು/ನೋವು/ಸಂಕಟವನ್ನುಂಟುಮಾಡುವುದು;

ಬಿಡು=ತೊರೆ/ತ್ಯಜಿಸು; ರೋಷ=ಸಿಟ್ಟು/ಕೋಪ/ಆಕ್ರೋಶ; ಪರಿ=ಬಿಡು/ತ್ಯಜಿಸು/ಇಲ್ಲವಾಗು; ಆಸೆ ಬಿಡದು=ಕೆಟ್ಟ ಆಸೆಗಳು ಬಿಟ್ಟುಹೋಗುವುದಿಲ್ಲ; ರೋಷ ಪರಿಯದು=ಸಿಟ್ಟು ಸೆಡವುಗಳು ಇಲ್ಲವಾಗುವುದಿಲ್ಲ;

ನೂರನೋದಿ ನೂರ ಕೇಳಿ ಏನು ಆಸೆ ಬಿಡದು ರೋಷ ಪರಿಯದು=ಹಲವು ರೀತಿಯ ವಿಚಾರಗಳನ್ನು ಒಳಗೊಂಡ ಬರಹಗಳನ್ನು ಓದುವುದರಿಂದ ಮತ್ತು ಗುರುಹಿರಿಯರು ಆಡಿದ ಮಾತುಗಳನ್ನು ಕೇಳಿ ಪಡೆದ ಅರಿವಿನಿಂದ ವ್ಯಕ್ತಿಯು ತನ್ನ ಜೀವನದಲ್ಲಿ ಇತರರಿಗೆ ಕೇಡನ್ನು ಬಗೆಯುವ ಕೆಟ್ಟ ಆಸೆಯನ್ನು ಬಿಟ್ಟು ಮತ್ತು ಮನದಲ್ಲಿ ಕೆರಳುವ ಕೋಪತಾಪವನ್ನು ಹತ್ತಿಕ್ಕಿಕೊಂಡು ಒಳ್ಳೆಯ ವ್ಯಕ್ತಿಯಾಗಿ ಬಾಳುವುದನ್ನು ಕಲಿಯದಿದ್ದರೆ, ಅಂತಹ ಅರಿವಿನ ಗಳಿಕೆಯಿಂದ ಯಾವ ಪ್ರಯೋಜನವೂ ಇಲ್ಲ.

ಏಕೆಂದರೆ ವ್ಯಕ್ತಿಯು ತಾನು ಪಡೆದ ಅರಿವಿನಿಂದ ತನ್ನ ಜೀವನವನ್ನು ಒಳ್ಳೆಯ ರೀತಿಯಲ್ಲಿ ರೂಪಿಸಿಕೊಂಡು ಸಮಾಜಕ್ಕೆ ಒಳಿತನ್ನು ಮಾಡದಿದ್ದಾಗ, ಓದು ಎಂಬುದು ಇತರರ ಮುಂದೆ ತೋರಿಸಿಕೊಳ್ಳುವ ಪಾಂಡಿತ್ಯವಾಗುತ್ತದೆಯೇ ಹೊರತು, ಅದರಿಂದ ಯಾರಿಗೂ ಏನೊಂದು ಬಗೆಯಲ್ಲಿಯೂ ಪ್ರಯೋಜನವಾಗುವುದಿಲ್ಲವೆಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಯಾಗಿವೆ; 'ಪಾಂಡಿತ್ಯ' ಎಂದರೆ ವ್ಯಕ್ತಿಯು ತಾನು ಓದಿ/ಕೇಳಿ ತಿಳಿದಿರುವ ನುಡಿಗಳನ್ನು ಮತ್ತೆ ಮತ್ತೆ ಅದೇ ರೀತಿಯಲ್ಲಿ ಉಚ್ಚರಿಸುತ್ತಿರುವುದು;

ಮಜ್ಜನಕ್ಕೆ+ಎರೆದು; ಮಜ್ಜನ=ಸ್ನಾನ/ಜಳಕ/ಮಯ್ ತೊಳೆಯುವಿಕೆ; ಎರೆ=ಸುರಿ/ಹೊಯ್ಯು; ಎರೆದು=ಸುರಿದು/ಹೊಯ್ದು; ಮಜ್ಜನಕ್ಕೆರೆ=ದೇವರ ವಿಗ್ರಹವನ್ನು ತೊಳೆಯುವುದಕ್ಕಾಗಿ ನೀರು/ಹಾಲು/ಜೇನು ಮುಂತಾದುವನ್ನು ಸುರಿಯುವುದು/ದೇವರ ಪೂಜೆಯಲ್ಲಿನ ಒಂದು ಆಚರಣೆ; ಫಲ+ಏನು; ಫಲ=ಪ್ರಯೋಜನ/ಉಪಯೋಗ/ಪರಿಣಾಮ;

ಮಜ್ಜನಕ್ಕೆರೆದು ಫಲವೇನು=ವ್ಯಕ್ತಿಯು ಒಳ್ಳೆಯ ನಡೆನುಡಿಗಳನ್ನು ತನ್ನ ದಿನನಿತ್ಯದ ಜೀವನದಲ್ಲಿ ಆಚರಿಸದೆ ಮಾಡುವ ದೇವರ ಪೂಜೆಯಿಂದ/ಆಚರಣೆಯಿಂದ ಯಾವ ಪ್ರಯೋಜನವೂ ಇಲ್ಲ; ಮಾತು+ಅಂತೆ; ಮಾತು=ನುಡಿ/ಸೊಲ್ಲು; ಅಂತೆ=ಹಾಗೆ/ಆ ರೀತಿ/ಆ ಬಗೆ; ಮನ+ಇಲ್ಲದ; ಮನ=ಮನಸ್ಸು; ಮನವಿಲ್ಲದ=ಮನಸ್ಸಿನಲ್ಲಿ ಇಲ್ಲದ ;

ಮಾತಿನಂತೆ ಮನ=ಸಾಮಾಜಿಕ ವ್ಯವಹಾರದಲ್ಲಿ ವ್ಯಕ್ತಿಯು ಇತರರೊಡನೆ ತಾನು ಆಡುವ ಒಳ್ಳೆಯ ಮಾತುಗಳಂತೆಯೇ, ತನ್ನ ಮನಸ್ಸಿನಲ್ಲಿಯೂ ಒಳ್ಳೆಯ ಉದ್ದೇಶವನ್ನು ಹೊಂದಿರುವುದು;

ಜಾತಿ=ಗುಂಪು/ವರ್ಗ/ರೀತಿ/ಬಗೆ; ಡಂಬ=ಮೋಸ/ವಂಚನೆ/ಬೂಟಾಟಿಕೆ/ಸೋಗಿನ ನಡೆನುಡಿ; ಡಂಬರು=ವಂಚಕರು/ಮೋಸಗಾರರು/ಒಳಗೊಂದು ಹೊರಗೊಂದು ಬಗೆಯ ನಡೆನುಡಿಯುಳ್ಳ ತಳುಕಿನ ವ್ಯಕ್ತಿಗಳು;

ಜಾತಿ ಡಂಬರು=ಜನರಿಗೆ ಮೋಸಮಾಡುವುದರಲ್ಲಿ/ಜನರನ್ನು ವಂಚಿಸುವುದರಲ್ಲಿ/ ಕಪಟತನದ ನಡೆನುಡಿಗಳಲ್ಲಿ ನಿಪುಣರು/ಅತಿ ನೀಚ ವ್ಯಕ್ತಿಗಳು;

ಮಾತಿನಂತೆ ಮನವಿಲ್ಲದ ಜಾತಿ ಡಂಬರು=ಮನದೊಳಗೆ ಕೆಟ್ಟ ಉದ್ದೇಶವನ್ನು ಹೊಂದಿ, ಮಾತಿನಲ್ಲಿ ಸತ್ಯ/ನೀತಿ/ನ್ಯಾಯದ ನುಡಿಗಳನ್ನಾಡುತ್ತಾ ಜನರನ್ನು ವಂಚಿಸುತ್ತಿರುವ ತಳುಕುಬಳುಕಿನ/ವಂಚನೆಯ/ಸೋಗಲಾಡಿತನದ ವ್ಯಕ್ತಿಗಳು;

ನೋಡಿ=ಕಂಡು; ನಗು=ಆನಂದ ಉಂಟಾದಾಗ ಮಯ್ ಮನದಿಂದ ಹೊರಹೊಮ್ಮುವ ಒಳಮಿಡಿತ; ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು;

ಮಾತಿನಂತೆ ಮನವಿಲ್ಲದ ಜಾತಿ ಡಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವ=ಸಹಮಾನವರನ್ನು ಮತ್ತು ಸಮಾಜವನ್ನು ವಂಚಿಸುತ್ತಿರುವ ನಯವಂಚಕರು ಅದೇ ಸಮಯದಲ್ಲಿ ತಮ್ಮ ವ್ಯಕ್ತಿತ್ವವನ್ನು ಹಾಳು ಮಾಡಿಕೊಳ್ಳುತ್ತಿರುತ್ತಾರೆ. ಇಂದಲ್ಲ ನಾಳೆ ಎಂದಾದರೂ ಒಂದು ದಿನ ಇವರ ಕಪಟತನದ ನಡೆನುಡಿಗಳು ಬಯಲಾಗಿ ಜನಸಮುದಾಯದ ತಿರಸ್ಕಾರದ ವ್ಯಂಗ್ಯಕ್ಕೆ/ನಗೆಪಾಟಲಿಗೆ ಇಂತಹ ವ್ಯಕ್ತಿಗಳು ಗುರಿಯಾಗುತ್ತಾರೆ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ.)



೧೯) ನೀರ ಕಂಡಲ್ಲಿ ಮುಳುಗುವರಯ್ಯಾ
ಮರನ ಕಂಡಲ್ಲಿ ಸುತ್ತುವರಯ್ಯಾ

ಬತ್ತುವ ಜಲವ
ಒಣಗುವ ಮರನ
ಮಚ್ಚಿದವರು
ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ.

**ತಮ್ಮ ಬದುಕನ್ನು ಉತ್ತಮವಾದ ರೀತಿಯಲ್ಲಿ ಕಟ್ಟಿಕೊಂಡು ಮುನ್ನಡೆಸಲು ಒಳ್ಳೆಯ ನಡೆನುಡಿಗಳು ಅಗತ್ಯವೆಂಬುದನ್ನು ಮನಗಾಣದ ಜನರು, ದೇವರನ್ನು ಬಹುಬಗೆಯ ಆಚರಣೆಗಳ ಮೂಲಕ ಪೂಜಿಸುತ್ತಿರುವುದನ್ನು ಈ ವಚನದಲ್ಲಿ ಟೀಕಿಸಲಾಗಿದೆ.**

(ನೀರು=ಜಲ/ಉದಕ; ಕಾಣ್=ನೋಡು/ಗೋಚರಿಸು/ಕಣ್ಣಿಗೆ ಬೀಳು; ಕಂಡು+ಅಲ್ಲಿ; ಅಲ್ಲಿ=ಆ ಎಡೆ/ಜಾಗ; ಕಂಡಲ್ಲಿ=ಕಂಡ ಕಡೆಯಲ್ಲಿ/ಜಾಗದಲ್ಲಿ/ನೆಲೆಯಲ್ಲಿ; ಮುಳುಗುವರ್+ ಅಯ್ಯಾ; ಮುಳುಗು=ನೀರಿನೊಳಗೆ ಮಯ್ಯನ್ನು ಅದ್ದುವುದು/ಮೀಯುವುದು/ಸ್ನಾನ ಮಾಡುವುದು; ಮುಳುಗುವರು=ಮೀಯುತ್ತಾರೆ/ಸ್ನಾನ ಮಾಡುತ್ತಾರೆ/ಮಯ್ ತೊಳೆದುಕೊಳ್ಳುತ್ತಾರೆ; ಅಯ್ಯಾ=ಇತರರನ್ನು ಒಲವು ನಲಿವುಗಳಿಂದ ಮಾತನಾಡಿಸುವಾಗ ಬಳಸುವ ಪದ;

ನೀರ ಕಂಡಲ್ಲಿ ಮುಳುಗುವರಯ್ಯಾ= ದೇಗುಲ ಇಲ್ಲವೇ ಪವಿತ್ರವಾದುದೆಂದು ಹೆಸರನ್ನು ಪಡೆದಿರುವ ಊರಿನಲ್ಲಿರುವ ಕೆರೆ/ಕೊಳ/ತೊರೆ/ನದಿಗಳಲ್ಲಿ ಮೀಯುವರು/ ಸ್ನಾನ ಮಾಡುವರು; ಇಂತಹ ನೀರಿನ ತಾಣಗಳಲ್ಲಿ ಮುಳುಗೇಳುವುದರಿಂದ ಜೀವನದಲ್ಲಿನ ಸಂಕಟ/ಆಪತ್ತು/ರೋಗರುಜಿನಗಳು ನಿವಾರಣೆಗೊಂಡು, ಬಯಸಿದ ಆಸೆಗಳೆಲ್ಲವೂ ಈಡೇರುವುವು ಮತ್ತು ವ್ಯಕ್ತಿಯು ತಿಳಿದು ಇಲ್ಲವೇ ತಿಳಿಯದೇ ಮಾಡಿದ ಕೆಟ್ಟ ಕೆಲಸಗಳಿಂದ ಬದುಕಿಗೆ ಅಂಟಿಕೊಂಡಿರುವ ಕೆಟ್ಟತನದ/ಪಾಪದ ಕೊಳೆಯು ತೊಳೆದುಹೋಗಿ ಒಳಿತು ಉಂಟಾಗುತ್ತದೆ/ಪುಣ್ಯ ದೊರೆಯುತ್ತದೆ ಎಂಬ ನಂಬಿಕೆಯು ತಲೆತಲಾಂತರಗಳಿಂದಲೂ ಜನಮನದಲ್ಲಿ ನೆಲೆಯೂರಿದೆ;

ಮರ=ತರು/ಹಚ್ಚಹಸಿರಿನ ರೆಂಬೆಕೊಂಬೆಗಳಿಂದ ಕೂಡಿರುವ ದೊಡ್ಡ ಗಿಡ; ಸುತ್ತುವರ್+ಅಯ್ಯಾ: ಸುತ್ತು=ಬಳಸು/ತಿರುಗು/ಅಲೆದಾಡು; ಸುತ್ತುವರು=ಬಳಸುತ್ತಾರೆ/ ತಿರುಗುತ್ತಾರೆ;

ಮರನ ಕಂಡಲ್ಲಿ ಸುತ್ತುವರಯ್ಯಾ=ಮರದ ಬುಡದ ಸುತ್ತಲೂ ಹೆಜ್ಜೆಗಳನ್ನಿಡುತ್ತ ಮೂರು/ಏಳು/ಒಂಬತ್ತು/ಹನ್ನೊಂಧು ಬಾರಿ ತಿರುಗುವರು; ಕೆಲವು ಬಗೆಯ ಮರಗಿಡಗಳಲ್ಲಿ ದೇವತೆಗಳು ನೆಲೆಸಿದ್ದಾರೆ ಎಂಬ ನಂಬಿಕೆಯು ಜನಮನದಲ್ಲಿದೆ. ದೇವರ ಕರುಣೆಗೆ/ಅನುಗ್ರಹಕ್ಕೆ ಪಾತ್ರರಾಗಿ ತಮ್ಮ ಬದುಕಿನಲ್ಲಿ ಒಳಿತನ್ನು ಹೊಂದುವ ಬಯಕೆಯಿಂದ ದೇವರ ಹೆಸರನ್ನು ಉಚ್ಚರಿಸುತ್ತಾ ಮರವನ್ನು ಸುತ್ತುವ ಆಚರಣೆಯು ಜನಸಮುದಾಯದಲ್ಲಿ ಕಂಡುಬರುತ್ತದೆ. ಕನ್ನಡ ಜನಸಮುದಾಯದಲ್ಲಿ ಅರಳಿ ಮರ/ ಬಿಲ್ವ ಪತ್ರೆಯ ಮರ/ಬೇವಿನ ಮರ/ಎಕ್ಕದ ಗಿಡದ ಬಳಿಯಲ್ಲಿ ಈ ಬಗೆಯ ಆಚರಣೆಯು ಕಂಡು ಬರುತ್ತದೆ.

ಇನ್ನು ಕೆಲವರು ತಮ್ಮ ಜೀವನದ ಬಯಕೆಗಳನ್ನು ಈಡೇರಿಸುವಂತೆ ದೇವರ ಹೆಸರಿನಲ್ಲಿ ಹರಕೆಯನ್ನು ಕಟ್ಟಿಕೊಂಡು/ಮಾಡಿಕೊಂಡು, ಅದರ ಸಂಕೇತವಾಗಿ ನಾನಾ ಬಗೆಯ ವಸ್ತುಗಳನ್ನು ಬಟ್ಟೆಯ ತುಂಡಿನಲ್ಲಿ ಕಟ್ಟಿ ಮರಗಿಡಗಳ ಕೊಂಬೆರೆಂಬೆಗಳಿಗೆ ಬಿಗಿಯುತ್ತಾರೆ. ತಮ್ಮ ಕೋರಿಕೆಯು ಈಡೇರಿದರೆ, ದೇವರಿಗೆ ತಾವು ತಂದೊಪ್ಪಿಸುವುದಾಗಿ ಹೆಸರಿಸಿದ್ದ ಕಾಣಿಕೆಯನ್ನು ನೀಡುತ್ತಾರೆ. ಈ ಆಚರಣೆಗಳೆಲ್ಲವೂ ಜನಸಮುದಾಯದ ನಂಬಿಕೆ ಮತ್ತು ಸಂಪ್ರದಾಯಕ್ಕೆ ಒಳಪಟ್ಟಿವೆ;

ಬತ್ತು=ಒಣಗು/ಆರು/ಬರಿದಾಗು/ಇಲ್ಲವಾಗು; ಜಲ=ನೀರು/ಉದಕ; ಒಣಗು= ನೀರಿನ ಅಂಶ/ಜೀವರಸ ಇಲ್ಲದಂತಾಗುವುದು; ಬತ್ತುವ ಜಲ=ಬೇಸಿಗೆಯ ತಾಪದಲ್ಲಿ ನೀರು ಹಿಂಗಿಹೋಗಿ ಕೆರೆಕಟ್ಟೆಗಳು ಬರಿದಾಗುವುದು/ನೀರಿನ ಒರತೆಯು ಕಡಿಮೆಯಾಗಿ ನದಿ ತೊರೆಗಳಲ್ಲಿ ಹರಿಯುತ್ತಿದ್ದ ನೀರು ನಿಂತುಹೋಗುವುದು;

ಒಣಗುವ ಮರ=ನೀರಿನ ಆಸರೆಯಿಲ್ಲದೆ ಇಲ್ಲವೇ ವಯಸ್ಸಾದ ಕಾರಣದಿಂದ ಬೇರುಗಳ ಕಸುವು ಕುಗ್ಗಿ ಜೀವರಸವನ್ನು ಕಳೆದುಕೊಂಡು ಮರ ಬೆಂಡಾಗುವುದು/ ಒಣಗುವುದು;

ಮಚ್ಚು=ಮೆಚ್ಚು/ಒಲಿ/ಒಪ್ಪು/ಬಯಸು; ಮಚ್ಚಿದವರು=ಒಲಿದವರು/ಬಯಸುವವರು/ ನಂಬಿದವರು; ನಿಮ್ಮನ್+ಎತ್ತ; ನಿಮ್ಮನ್=ಕೂಡಲಸಂಗಮನನ್ನು; ಎತ್ತ=ಯಾವ ಕಡೆ/ ಯಾವ ದಿಕ್ಕು/ಯಾವ ರೀತಿ/ಯಾವ ಬಗೆ; ಬಲ್=ತಿಳಿ/ಅರಿ; ಬಲ್ಲರು=ತಿಳಿದಿರುವರು/ ಅರಿತಿರುವರು; ಕೂಡಲಸಂಗಮದೇವಾ=ಬಸವಣ್ಣನ ಮೆಚ್ಚಿನ ದೇವರು;

ವಚನಕಾರ ಬಸವಣ್ಣನನ್ನು ಒಳಗೊಂಡಂತೆ ಶಿವಶರಣಶರಣೆಯರೆಲ್ಲರ ಪಾಲಿಗೆ ದೇವರು ಎಂಬುವ ಶಕ್ತಿ/ವ್ಯಕ್ತಿಯು ಮರ/ಕಲ್ಲು/ಮಣ್ಣು/ಲೋಹದಿಂದ ರೂಪು

ಗೊಂಡಿದ್ದಾಗಿರಲಿಲ್ಲ. ದೇವರನ್ನು ಅವರು ವ್ಯಕ್ತಿಯ ಒಳ್ಳೆಯ ನಡೆನುಡಿಗಳಲ್ಲಿ ಕಾಣುತ್ತಿದ್ದರು. "ಒಳ್ಳೆಯ ನಡೆನುಡಿಗಳು" ಎಂದರೆ ವ್ಯಕ್ತಿಯು ತನ್ನ ಜೀವನದಲ್ಲಿ ಆನಂದ/ನೆಮ್ಮದಿ/ಒಳಿತನ್ನು ಬಯಸುವಂತೆಯೇ ಸಹಮಾನವರ ಮತ್ತು ಸಮಾಜದ ಒಳಿತಿಗೆ ನೆರವಾಗುವ ರೀತಿಯ ನಡೆನುಡಿಗಳನ್ನು ಹೊಂದಿರುವುದು.

ಜನಸಮುದಾಯವೆಲ್ಲವೂ "ಅನ್ನ/ಬಟ್ಟೆ/ವಸತಿ/ವಿದ್ಯೆ/ಉದ್ಯೋಗ/ಆರೋಗ್ಯವನ್ನು" ಹೊಂದಿ, ಎಲ್ಲರೂ ಒಡಗೂಡಿ ಬಾಳಬೇಕಾದರೆ ಪ್ರತಿಯೊಬ್ಬ ವ್ಯಕ್ತಿಯು ಇತರರನ್ನು ವಂಚಿಸದ/ಇತರರಿಗೆ ಕೇಡನ್ನೆಣಿಸದ ನಡೆನುಡಿಗಳನ್ನು ಹೊಂದಿರಬೇಕು. ಆಗ ಒಂದು ಒಳ್ಳೆಯ ಸಮಾಜ ರೂಪುಗೊಂಡು ಪ್ರತಿಯೊಬ್ಬ ವ್ಯಕ್ತಿಯ ಜೀವನ ಒಲವು ನಲಿವು ನೆಮ್ಮದಿಯಿಂದ ಕೂಡಿರುತ್ತದೆ. ಕೂಡಲಸಂಗಮದೇವನನ್ನು ತಿಳಿಯುವುದು/ಅರಿಯುವುದು ಎಂದರೆ ಸಾಮಾಜಿಕ ವ್ಯಕ್ತಿಯಾಗಿ ಒಳ್ಳೆಯ ರೀತಿಯಲ್ಲಿ ಬಾಳುವುದನ್ನು ಕಲಿಯುವುದು;

ಬತ್ತುವ ಜಲವ ಒಣಗುವ ಮರನ ಮಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ=ಹಿಂಗಿಹೋಗುವ ನೀರನ್ನು, ಒಣಗಿಹೋಗುವ ಮರವನ್ನು ದೇವರೆಂದು ನಂಬಿರುವ ಜನರು ಒಳ್ಳೆಯ ನಡೆನುಡಿಯ ಸಂಕೇತವಾಗಿರುವ ನಿನ್ನನ್ನು ಹೇಗೆ ತಾನೆ ತಿಳಿಯಬಲ್ಲರು?

ಒಳ್ಳೆಯ ನಡೆನುಡಿಗಳೇ ದೇವರು ಎಂದು ಅರಿತಾಗ ಮಾತ್ರ ಜನರು ಬಹು ಹಿಂದಿನಿಂದಲೂ ಸಂಪ್ರದಾಯವಾಗಿ ಬಂದಿರುವ ಆಚರಣೆಗಳನ್ನು ತೊರೆದು, ತಮ್ಮ ಬದುಕನ್ನು ಒಳ್ಳೆಯ ನಡೆನುಡಿಗಳಿಂದ ಉತ್ತಮವಾಗಿ ರೂಪಿಸಿಕೊಳ್ಳಬಲ್ಲರು ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ;



೨೦) ನೋಡುವರುಳ್ಳಡೆ
ಮಾಡುವೆ ದೇಹಾರವ

ಎನಗೊಂದು ನಿಜವಿಲ್ಲ
ಎನಗೊಂದು ನಿಷ್ಪತ್ತಿಯಿಲ್ಲ

ಲಿಂಗವ ತೋರಿ
ಉದರವ ಹೊರೆವ

ಭಂಗಗಾರ ನಾನು
ಕೂಡಲಸಂಗಮದೇವಾ.

**ತನ್ನ ದಿನನಿತ್ಯದ ವ್ಯವಹಾರಗಳಲ್ಲಿ ಒಳ್ಳೆಯ ನಡೆನುಡಿಗಳನ್ನು ಹೊಂದಿರದ ವ್ಯಕ್ತಿಯು ಮಾಡುವ ದೇವರ ಪೂಜೆಯು ಇತರರನ್ನು ಓಲಯಿಸಿ ಒಲಿಸಿಕೊಂಡು ಹೊಟ್ಟೆಯನ್ನು ಹೊರೆದುಕೊಳ್ಳುವ ಬೂಟಾಟಿಕೆಯ ವರ್ತನೆಯಾಗಿರುತ್ತದೆ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

(ನೋಡುವರ್+ಉಳ್ಳಡೆ; ನೋಡು=ಕಾಣು/ಗಮನಿಸು; ಉಳ್=ಇರು; ಉಳ್ಳಡೆ=ಇದ್ದರೆ; ನೋಡುವರುಳ್ಳಡೆ=ನೋಡುವವರು ಇದ್ದಾಗ; ಮಾಡು=ಆಚರಿಸು/ನೆರವೇರಿಸು/ನಡೆದುಕೊಳ್ಳು; ಮಾಡುವೆ=ಮಾಡುತ್ತೇನೆ; ದೇಹಾರ=ಪೂಜೆ/ಅರ್ಚನೆ/ದೇವರಿಗೆ ಎಡೆಯನ್ನು ನೀಡುವ ಆಚರಣೆ; ದೇಹಾರವ=ದೇವರ ಪೂಜೆಯನ್ನು;

ನೋಡುವರುಳ್ಳಡೆ ಮಾಡುವೆ ದೇಹಾರವ=ಇತರರು ನನ್ನನ್ನು ಗಮನಿಸುತ್ತಿದ್ದಾರೆ ಎಂಬುದನ್ನು ತಿಳಿದಾಗ, ದೇವರಲ್ಲಿ ಅಪಾರವಾದ ಒಲವು ನಲಿವು ನಂಬಿಕೆಗಳನ್ನು ಇಟ್ಟಿರುವ ವ್ಯಕ್ತಿಯಂತೆ ಪೂಜೆಯಲ್ಲಿ ತೊಡಗುತ್ತೇನೆ. ಏಕೆಂದರೆ ನೋಡುವವರ ಮೆಚ್ಚುಗೆ/ಒಲವು/ಕರುಣೆಗೆ ಪಾತ್ರನಾಗಿ, ಅವರಿಂದ ನನಗೆ ಬೇಕಾದುದನ್ನು ಪಡೆಯಬೇಕೆಂಬ ಉದ್ದೇಶ ನನ್ನದಾಗಿರುತ್ತದೆ;

ಎನಗೆ+ಒಂದು; ಎನಗೆ=ನನಗೆ; ನಿಜ+ಇಲ್ಲ; ನಿಜ=ದಿಟ/ಸತ್ಯ/ವಾಸ್ತವ;

ಎನಗೊಂದು ನಿಜವಿಲ್ಲ=ದಿನನಿತ್ಯದ ಜೀವನದ ವ್ಯವಹಾರಗಳಲ್ಲಿ ನಿಜದ ನಡೆನುಡಿಗಳಿಂದ ನಾನು ಬಾಳುತ್ತಿಲ್ಲ;

ನಿಷ್ಪತ್ತಿ+ಇಲ್ಲ; ನಿಷ್ಪತ್ತಿ=ನಿರ್ಣಯ/ತೀರ್ಮಾನ/ನಿಲುವು;

ಎನಗೊಂದು ನಿಷ್ಪತ್ತಿಯಿಲ್ಲ=ಬದುಕಿನಲ್ಲಿ ಯಾವುದು ಒಳಿತು-ಯಾವುದು ಕೆಡುಕು ಎಂಬುದನ್ನು ಅರಿತುಕೊಂಡು, ಕೆಟ್ಟದ್ದನ್ನು ಬಿಟ್ಟು ಒಳ್ಳೆಯದನ್ನು ಅನುಸರಿಸಬೇಕೆಂಬ ಗಟ್ಟಿಯಾದ ನಿಲುವನ್ನು ನಾನು ಹೊಂದಿಲ್ಲ;

ಲಿಂಗ=ಶಿವನ ಸಂಕೇತವಾದ ವಿಗ್ರಹ; ತೋರು=ಇತರರು ಕಾಣುವಂತೆ ಮಾಡು/ಇತರರ ಕಣ್ಣಿಗೆ ಬೀಳುವಂತೆ ಮಾಡು; ಉದರ=ಹೊಟ್ಟೆ/ಒಡಲು; ಹೊರೆ=ಕಾಪಾಡು/ಸಲಹು;

ಲಿಂಗವ ತೋರಿ ಉದರವ ಹೊರೆವುದು=ದೇವರನ್ನು ಮುಂದೆ ಮಾಡಿಕೊಂಡು/ದೇವರ ಹೆಸರಿನಲ್ಲಿ/ದೇವರ ಪೂಜೆಯ ನೆಪದಲ್ಲಿ ಹೊಟ್ಟೆಯ ಪಾಡನ್ನು ನೀಗಿಸಿಕೊಳ್ಳುವುದು/ಹಣವನ್ನು ಸಂಪಾದನೆ ಮಾಡುವುದು;

ಭಂಗ=ಕಪಟ/ಮೋಸ/ವಂಚನೆ; ಭಂಗಗಾರ=ಕಪಟಿ/ಮೋಸಗಾರ/ವಂಚಕ; ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತನಾಮ;

ಲಿಂಗವ ತೋರಿ ಉದರವ ಹೊರೆವ ಭಂಗಗಾರ ನಾನು ಕೂಡಲಸಂಗಮದೇವಾ =ಶಿವಶರಣಶರಣೆಯರ ಪಾಲಿಗೆ ಲಿಂಗ ಎಂಬುದು ಒಳ್ಳೆಯ ನಡೆನುಡಿಗಳಿಗೆ ಒಂದು ಸಂಕೇತವಾಗಿತ್ತು. ವ್ಯಕ್ತಿಯು ಆಡುವ ಒಳ್ಳೆಯ ಮಾತು ಮತ್ತು ಮಾಡುವ ಒಳ್ಳೆಯ ಕಾಯಕವೇ ಲಿಂಗದ ಪೂಜೆಯಾಗಿತ್ತು. ಆದರೆ ಜನಸಮುದಾಯದಲ್ಲಿ ಬಹುತೇಕ ಮಂದಿ ತಂತಮ್ಮ ಆಸೆಗಳ ಈಡೇರಿಕೆಗಾಗಿ ಮತ್ತು ಬವಣೆಗಳ ನಿವಾರಣೆಗಾಗಿ ದೇವರನ್ನು ಪೂಜಿಸುತ್ತಿದ್ದಾರೆಯೇ ಹೊರತು ಒಳ್ಳೆಯ ನಡೆನುಡಿಗಳ ಆಚರಣೆಯೇ ದೇವರು ಎಂಬ ಅರಿವನ್ನು ಹೊಂದಿಲ್ಲ ಎಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ.)



೨೧) ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ
ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ

ತನುವಿನಲ್ಲಿ ಹುಸಿ ತುಂಬಿ
ಮನದೊಳಗೆ ವಿಷಯ ತುಂಬಿ
ಮನದೊಳಗೆ ಮನದೊಡೆಯನಿಲ್ಲ
ಕೂಡಲಸಂಗಮದೇವಾ.

ಸುಳ್ಳು, ತಟವಟ, ಮೋಸ, ಕ್ರೂರತನ ಮತ್ತು ಕೆಟ್ಟ ಆಸೆಯಿಂದ ಕೂಡಿದ ನಡೆನುಡಿಯುಳ್ಳ ವ್ಯಕ್ತಿಯ ಮಯ್ ಮನದಲ್ಲಿ ದೇವರು ನೆಲೆಸಿರುವುದಿಲ್ಲ ಎಂಬ ಸಂಗತಿಯನ್ನು ರೂಪಕವೊಂದರ ಮೂಲಕ ಈ ವಚನದಲ್ಲಿ ಹೇಳಲಾಗಿದೆ.

ವ್ಯಕ್ತಿಯು ಪಡೆದುಕೊಂಡಿರುವ ಅರಿವು ಮತ್ತು ಎಚ್ಚರದ ನಡೆನುಡಿಯನ್ನು ದೇವರೆಂದು ಶಿವಶರಣಶರಣೆಯರು ತಿಳಿದಿದ್ದರು.

ಅರಿವು ಎಂದರೆ "ಜೀವನದಲ್ಲಿ ಯಾವುದು ಒಳ್ಳೆಯದು/ಯಾವುದು ಕೆಟ್ಟದ್ದು; ಯಾವುದು ಸರಿ/ಯಾವುದು ತಪ್ಪು; ಯಾವುದು ದಿಟ/ಯಾವುದು ಸಟೆ ; ಯಾವುದು ನಿಸರ್ಗ ಸಹಜವಾದುದು/ಯಾವುದು ಮಾನವನಿಂದ ರಚನೆಗೊಂಡಿದೆ" ಎಂಬ ತಿಳುವಳಿಕೆ.

ಎಚ್ಚರದ ನಡೆನುಡಿ ಎಂದರೆ "ವ್ಯಕ್ತಿಯು ತನ್ನ ಮಯ್ ಮನದಲ್ಲಿ ತುಡಿಯುವ ಕೆಟ್ಟ ಒಳಮಿಡಿತಗಳನ್ನು ಹತ್ತಿಕ್ಕಿಕೊಂಡು ತನ್ನನ್ನು ಒಳಗೊಂಡಂತೆ ಸಹಮಾನವರ ಮತ್ತು ಸಮಾಜದ ಒಳಿತಿಗೆ ಪೂರಕವಾಗುವಂತೆ ಬಾಳುವುದು."

(ಮನೆ+ಒಳಗೆ; ಮನೆ=ಜನರು ವಾಸಿಸುವ ಜಾಗ/ಬೀಡು/ನೆಲೆ; ಒಳಗೆ=ಆ ನೆಲೆಯಲ್ಲಿ/ಬೀಡಿನಲ್ಲಿ; ಮನೆ+ಒಡೆಯನ್+ಇದ್ದಾನೊ; ಒಡೆಯ=ಯಜಮಾನ/ಮನೆಯನ್ನು ಚೆನ್ನಾಗಿ ಕಾಪಾಡಿಕೊಳ್ಳುವ ಹೊಣೆಯನ್ನು ಹೊತ್ತಿರುವ ವ್ಯಕ್ತಿ; ಇರು=ವಾಸಮಾಡು/

ಬದುಕು/ನೆಲಸು; ಇದ್ದಾನೊ=ಇರುವನೋ/ವಾಸಮಾಡುತ್ತಿರುವನೋ/ನೆಲೆಸಿರುವನೋ; ಇಲ್ಲವೋ=ವಾಸಮಾಡುತ್ತಿಲ್ಲವೋ/ನೆಲೆಸಿಲ್ಲವೋ;

ಹೊಸ್ತಿಲು=ಮನೆಯ ಮುಂದುಗಡೆಯ ಬಾಗಿಲಿನ ಚವುಕಟ್ಟಿನಲ್ಲಿರುವ ಕೆಳಗಿನ ದಪ್ಪನೆಯ ಪಟ್ಟಿ; ಹುಲ್ಲು=ಗರಿಕೆ/ಚಿಕ್ಕದಾಗಿ ಬೆಳೆದಿರುವ ಹಸಿರಿನ ಪಯಿರು/ಹಲವಾರು ಬಗೆಯ ಕಳೆ/ಹಂಬು/ಗಿಡಗಳು; ಹುಟ್ಟು=ಬೆಳೆ; ರಜ=ದೂಳು/ಕಸಕಡ್ಡಿ/ದುಂಬು/ಕೊಳಕು ವಸ್ತುಗಳು; ತುಂಬು=ಹರಡು/ವ್ಯಾಪಿಸು;

ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ ಮನೆಯೊಡೆಯನಿದ್ದಾನೊ ಇಲ್ಲವೋ=ಮನೆಯ ಮುಂದುಗಡೆಯ ಹೊಸ್ತಿಲ ಎಡೆಯಲ್ಲಿ ಹುಲ್ಲು ಹುಟ್ಟಿ, ಮನೆಯ ಒಳಗಡೆ ರಜ ತುಂಬಿಕೊಂಡಿದ್ದರೆ, ಆ ಮನೆಯ ಒಡೆಯನಾಗಲಿ ಇಲ್ಲವೇ ಇನ್ನಿತರ ವ್ಯಕ್ತಿಗಳಾಗಲಿ ಆ ಮನೆಯಲ್ಲಿ ವಾಸವಾಗಿಲ್ಲವೆಂದು ಮೇಲುನೋಟಕ್ಕೆ ಗೊತ್ತಾಗುತ್ತದೆ;

ತನು+ಇನ್+ಅಲ್ಲಿ; ತನು=ಮಯ್/ದೇಹ/ಶರೀರ; ತನುವಿನಲ್ಲಿ=ಮಯ್ಯಲ್ಲಿ/ದೇಹದಲ್ಲಿ; ಹುಸಿ=ಸುಳ್ಳು/ಹುಸಿ/ಇರುವುದನ್ನು ಇಲ್ಲವೆಂದು-ಇಲ್ಲದ್ದನ್ನು ಇದೆಯೆಂದು ಹೇಳುವುದು;

ತನುವಿನೊಳಗೆ ಹುಸಿ ತುಂಬಿ=ದಿನನಿತ್ಯದ ವ್ಯವಹಾರಗಳಲ್ಲಿ ಸುಳ್ಳನ್ನಾಡಿ ತನ್ನ ಹಿತಕ್ಕಾಗಿ ಇತರರನ್ನು/ಸಮಾಜವನ್ನು ವಂಚಿಸಿ, ಕೇಡನ್ನು ಬಗೆಯುತ್ತಿರುವ ನಡೆನುಡಿಗಳಿಂದ ಕೂಡಿ;

ಮನದ+ಒಳಗೆ; ಮನ=ಮನಸ್ಸು; ಮನದೊಳಗೆ=ಮನಸ್ಸಿನಲ್ಲಿ; ವಿಷಯ=ಅಯ್ದು ಇಂದ್ರಿಯಗಳಾದ ಕಣ್ಣು/ಕಿವಿ/ಮೂಗು/ತೊಗಲು/ನಾಲಗೆಯು ಬಯಸಿದ್ದೆಲ್ಲವನ್ನೂ ಎಂತಾದರೂ ಮಾಡಿ ಪಡೆದುಕೊಳ್ಳಬೇಕೆಂಬ ತುಡಿತ;

ಮನದೊಳಗೆ ವಿಷಯ ತುಂಬಿ=ಕೆಟ್ಟ ಆಸೆಗಳನ್ನು ಮನದಲ್ಲಿ ತುಂಬಿಕೊಂಡು;

ಮನದ+ಒಡೆಯನ್+ಇಲ್ಲ; ಮನದೊಡೆಯ=ಅರಿವು ಮತ್ತು ಎಚ್ಚರದ ನಡೆನುಡಿಯ ಸಂಕೇತನಾದ ದೇವರು;

ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತ ನಾಮ;

ತನುವಿನೊಳಗೆ ಹುಸಿ ತುಂಬಿ ಮನದೊಳಗೆ ವಿಷಯ ತುಂಬಿ ಮನದೊಳಗೆ ಮನದೊಡೆಯನಿಲ್ಲ ಕೂಡಲಸಂಗಮದೇವಾ=ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆಯುವಂತಹ ಸುಳ್ಳುಗಾರನ ಮತ್ತು ಕೆಟ್ಟ ನಡೆನುಡಿಯುಳ್ಳ ವ್ಯಕ್ತಿಯ ಮನದಲ್ಲಿ ದೇವರು ನೆಲೆಯಾಗಿರುವುದಿಲ್ಲ.

ದಿನನಿತ್ಯವೂ ಮನೆಯ ಮುಂದಿನ ಜಾಗದ ಕಸವನ್ನು ತೆಗೆದು ಹೊಸ್ತಿಲನ್ನು ತೊಳೆದು ಮತ್ತು ಮನೆಯ ಒಳಗಿನ ದೂಳು ದುಂಬನ್ನು ಗುಡಿಸಿ ಮನೆಯನ್ನು ಒಪ್ಪವಾಗಿ ಇಟ್ಟುಕೊಳ್ಳಬೇಕಾದ ಒಡೆಯನು ವಾಸವಾಗಿಲ್ಲದಿರುವುದರಿಂದ ಮನೆಯ ಹೊಸ್ತಿಲಲ್ಲಿ ಹುಲ್ಲು ಬೆಳೆದು ಮನೆಯೊಳಗೆ ಕಸಕಡ್ಡಿ ದೂಳುತುಂಬಿಕೊಂಡಿದೆ.

ಈ ರೂಪಕದ ಮೂಲಕ ವಚನಕಾರನು ವ್ಯಕ್ತಿಯು ತನ್ನ ಜೀವನದ ಉದ್ದಕ್ಕೂ ಪ್ರತಿಗಳಿಗೆಯಲ್ಲಿಯೂ ತನ್ನ ಮಯ್ ಮನದಲ್ಲಿ ತುಡಿಯುವಂತಹ ಒಳಿತು ಮತ್ತು ಕೆಡುಕಿನ ಒಳಮಿಡಿತಗಳಲ್ಲಿ, ಕೆಡುಕಿನ ಒಳಮಿಡಿತಗಳನ್ನು ಕಿತ್ತೊಗೆಯುತ್ತ, ಒಳ್ಳೆಯತನದಿಂದ ಬಾಳುತ್ತಿರಬೇಕು ಎಂಬುದನ್ನು ಸೂಚಿಸಿದ್ದಾನೆ.

ವ್ಯಕ್ತಿಯು ಜೀವನದ ಉದ್ದಕ್ಕೂ ನಿರಂತರವಾಗಿ ಅರಿವನ್ನು ಪಡೆದುಕೊಳ್ಳುತ್ತ, ಎಚ್ಚರದ ನಡೆನುಡಿಗಳಿಂದ ಬಾಳದಿದ್ದರೆ ಒಡೆಯನಿಲ್ಲದ ಮನೆಯು ಹಾಳುಬೀಳುವಂತೆ ವ್ಯಕ್ತಿಯ ಬದುಕು ಹಾಳಾಗುತ್ತದೆ ಎಂಬ ತಿರುಳನ್ನು ಈ ರೂಪಕ ಸೂಚಿಸುತ್ತದೆ.)



೨೨) ಮರ್ತ್ಯಲೋಕವೆಂಬುದು
ಕರ್ತಾರನ ಕಮ್ಮಟವಯ್ಯಾ

ಇಲ್ಲಿ ಸಲ್ಲುವರು
ಅಲ್ಲಿಯೂ ಸಲ್ಲುವರಯ್ಯಾ

ಇಲ್ಲಿ ಸಲ್ಲದವರು
ಅಲ್ಲಿಯೂ ಸಲ್ಲರು
ಕೂಡಲಸಂಗಮದೇವಾ.

ಜನರು ನೆಲೆಸಿರುವ ಇಹಲೋಕ ಮತ್ತು ಜನಮನದಲ್ಲಿರುವ ಕಲ್ಪನೆಯ ಲೋಕಗಳಲ್ಲಿ, ಯಾವ ಲೋಕದಲ್ಲಿ ಜನರು ಒಳ್ಳೆಯ ಜೀವನವನ್ನು ಮೊದಲು ನಡೆಸಬೇಕು ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.

ಒಳ್ಳೆಯ ಜೀವನ ಎಂದರೆ ವ್ಯಕ್ತಿಯು ತನ್ನನ್ನು ಒಳಗೊಂಡಂತೆ ಸಹಮಾನವರ ಮತ್ತು ಸಮಾಜದ ಹಿತಕ್ಕಾಗಿ ಒಳ್ಳೆಯ ನಡೆನುಡಿಗಳಿಂದ ಬಾಳುವುದು.

(ಮರ್ತ್ಯ+ಲೋಕ+ಎಂಬುದು; ಮರ್ತ್ಯ=ಮಾನವ/ಮನುಜ/ನರ; ಲೋಕ=ಜಗತ್ತು/ಪ್ರಪಂಚ ; ಮರ್ತ್ಯಲೋಕ=ಮಾನವರು ಹುಟ್ಟಿ ಬೆಳೆದು ಬಾಳಿ ಸಾಯುತ್ತಿರುವ 'ಭೂ'ಲೋಕ; ಎಂಬುದು=ಎನ್ನುವುದು; ಕರ್ತಾರ=ಬ್ರಹ್ಮ/ಜಗತ್ತನ್ನು ನಿರ್ಮಿಸಿದ ದೇವತೆ/'ಭೂ'ಲೋಕದಲ್ಲಿನ ಸಕಲ ಜೀವಿಗಳ ಹುಟ್ಟಿಗೆ ಕಾರಣನಾದವನು; ಕಮ್ಮಟ+ಅಯ್ಯಾ; ಕಮ್ಮಟ=ಟಂಕಸಾಲೆ/ನಾಣ್ಯಗಳನ್ನು ಮುದ್ರಿಸುವ ಮನೆ;

ನಾಡನ್ನು ಆಳುವ ರಾಜನು ಚಿನ್ನ/ಬೆಳ್ಳಿ/ಇನ್ನಿತರ ಲೋಹದಿಂದ ಮಾಡಿದ ನಾಣ್ಯಗಳ ಮೇಲೆ ತನ್ನ ಆಡಳಿತದ ಮುದ್ರೆಯನ್ನು ಒತ್ತಿ ಜನಸಮುದಾಯದ ವ್ಯಾಪಾರ ವ್ಯವಹಾರಗಳಿಗಾಗಿ ನಾಣ್ಯಗಳನ್ನು ಮುದ್ರಿಸಿ ಚಲಾವಣೆಗೆ ಬಿಡುತ್ತಿದ್ದನು. ರಾಜಮುದ್ರೆಯುಳ್ಳ ಲೋಹದ ನಾಣ್ಯಕ್ಕೆ ಮಾತ್ರ ಸಮಾಜದಲ್ಲಿ ಬೆಲೆಯಿರುತ್ತಿತ್ತು;

ಕರ್ತಾರನ ಕಮ್ಮಟ=ಬ್ರಹ್ಮನ ಟಂಕಸಾಲೆ; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ;

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ= 'ಕರ್ತಾರನ ಕಮ್ಮಟ' ಎಂಬ ನುಡಿಗಟ್ಟನ್ನು ಒಂದು ರೂಪಕವಾಗಿ ವಚನಕಾರನು ಬಳಸಿದ್ದಾನೆ.

ಮಾನವರು ನೆಲೆಸಿರುವ ಈ ಜಗತ್ತು ಎನ್ನುವುದು ಬ್ರಹ್ಮನು ನಿರ್ಮಿಸಿರುವ ಒಂದು ಟಂಕಸಾಲೆಯಾಗಿದೆ. ದೇವಲೋಕದಲ್ಲಿರುವ ಬ್ರಹ್ಮನೆಂಬ ದೇವತೆಯು ಮಾನವಜೀವಿಗಳ ಹುಟ್ಟಿಗೆ ಕಾರಣನಾಗಿದ್ದಾನೆ. ಬ್ರಹ್ಮನ ಕುಶಲ ಕಯ್ ಚಳಕದಿಂದಾಗಿ ಮಾನವರೆಲ್ಲರೂ ಈ ಜಗತ್ತಿನಲ್ಲಿ ರೂಪುಗೊಂಡಿದ್ದಾರೆ. ಇಲ್ಲಿ ಹುಟ್ಟಿ ಬೆಳೆದು ಬಾಳಿ ಸಾವನ್ನಪ್ಪಿದ ಮಾನವರಲ್ಲಿ ಒಳ್ಳೆಯ ನಡೆನುಡಿಗಳಿಂದ ಬಾಳಿದವರು ನೇರವಾಗಿ ದೇವಲೋಕದಲ್ಲಿರುವ ಸ್ವರ್ಗಕ್ಕೆ ಹೋಗುತ್ತಾರೆ; ಕೆಟ್ಟ ನಡೆನುಡಿಗಳಿಂದ ಬಾಳಿದವರನ್ನು ನರಕಕ್ಕೆ ತಳ್ಳಲಾಗುತ್ತದೆ ಎಂಬ ಕಲ್ಪನೆಯು ತಲೆತಲಾಂತರದಿಂದಲೂ ಜನಮನದಲ್ಲಿ ಹಾಸುಹೊಕ್ಕಾಗಿ ಬಂದಿದೆ.

ಇಲ್ಲಿ=ಈ ಜಾಗ/ಈ ಜಗತ್ತಿನಲ್ಲಿ/ಈ ಇಳೆಯಲ್ಲಿ; ಸಲ್=ತಕ್ಕುದಾಗಿರು/ಯೋಗ್ಯವಾಗಿರು/ಸರಿಯಾಗಿರು; ಸಲ್ಲುವರು=ಯೋಗ್ಯರಾಗಿ ಬಾಳಿ/ಒಳ್ಳೆಯ ರೀತಿಯಲ್ಲಿ ನಡೆದುಕೊಂಡು ಮನ್ನಣೆಯನ್ನು ಪಡೆಯುವವರು; ಅಲ್ಲಿ=ಆ ಜಾಗ/ದೇವಲೋಕದಲ್ಲಿ/ಸ್ವರ್ಗದಲ್ಲಿ; ಸಲ್ಲುವರ್+ಅಯ್ಯಾ;

ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ=ಟಂಕಸಾಲೆಯಲ್ಲಿ ರಾಜನ ಆಡಳಿತ ಮುದ್ರೆಯೊಡನೆ ತಯಾರಾದ ನಾಣ್ಯವು ಹೇಗೆ ನಾಡಿನಲ್ಲಿ ನಡೆಯುವ ವ್ಯವಹಾರಗಳಲ್ಲಿ ಸಲ್ಲುತ್ತದೆಯೋ ಅಂತೆಯೇ ಯಾರು ಈ ಜಗತ್ತಿನಲ್ಲಿ ಒಳ್ಳೆಯ ನಡೆನುಡಿಗಳಿಂದ ಬಾಳನ್ನು ನಡೆಸಿ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಿ ತಮ್ಮ ಬದುಕಿಗೆ ಒಂದು ಬೆಲೆಯನ್ನು ಪಡೆಯುತ್ತಾರೆಯೋ ಅಂತಹವರು ಸಾವನ್ನಪ್ಪಿದ ನಂತರ ದೇವಲೋಕ/ಸ್ವರ್ಗವನ್ನು ಸೇರಿ ಒಲವು ನಲಿವನ್ನು ಹೊಂದಲು ತಕ್ಕವರಾಗುತ್ತಾರೆ;

ಸಲ್ಲದವರು=ಒಳ್ಳೆಯ ನಡೆನುಡಿಗಳಿಂದ ಬಾಳದವರು/ಮಾನವ ಸಮುದಾಯಕ್ಕೆ ಕೇಡನ್ನು ಬಗೆದು ಹಾನಿಯನ್ನುಂಟು ಮಾಡಿದವರು; ಸಲ್ಲರು=ಯೋಗ್ಯರಾಗುವುದಿಲ್ಲ/ಇರಲು ತಕ್ಕವರಲ್ಲ; ಕೂಡಲಸಂಗಮದೇವಾ=ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತನಾಮ;

ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು ಕೂಡಲಸಂಗಮದೇವಾ=ಈ ಜಗತ್ತಿನಲ್ಲಿ ತಮ್ಮ ಬದುಕನ್ನು ಯಾರು ಒಳ್ಳೆಯ ರೀತಿಯಲ್ಲಿ ನಡೆಸುವುದಿಲ್ಲವೋ ಅಂತಹ ವ್ಯಕ್ತಿಗಳು ದೇವಲೋಕದಲ್ಲಿಯೂ/ಸ್ವರ್ಗದಲ್ಲಿಯೂ ನೆಲಸಲು ತಕ್ಕವರಲ್ಲ;

ಈ ಮಾತಿನಲ್ಲಿ ಜನಮನದಲ್ಲಿರುವ ಮರ್ತ್ಯಲೋಕ/ದೇವಲೋಕಗಳ ಕಲ್ಪನೆಯನ್ನು ಕಡೆಗಣಿಸದೆ, ಅದರ ಮೂಲಕವೇ ಮಾನವ ಬದುಕಿನಲ್ಲಿ ಒಳ್ಳೆಯ ನಡೆನುಡಿಯು ಎಲ್ಲಕ್ಕಿಂತ ದೊಡ್ಡದೆಂಬುದನ್ನು ಹೇಳಲಾಗಿದೆ.

ವ್ಯಕ್ತಿಯ ತನ್ನ ಜೀವಮಾನದ ಉದ್ದಕ್ಕೂ ಕೆಟ್ಟ ನಡೆನುಡಿಯುಳ್ಳವನಾಗಿದ್ದರೂ, ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡನ್ನು ಬಗೆದು ಸಂಪಾದಿಸಿದ ಹಣದಿಂದ ದೇವರ ಸೇವೆಯನ್ನು ಮಾಡಿದರೆ/ಸಾಯುವ ಕೊನೆಗಳಿಗೆಯಲ್ಲಿ ದೇವರ ಹೆಸರನ್ನು ಉಚ್ಚರಿಸಿದರೆ/ಸಾಯುವಾಗ ಗಂಗಾ ಜಲವನ್ನು ಕುಡಿದರೆ ಮಾಡಿದ ಪಾಪವೆಲ್ಲವೂ ಹೊರಟುಹೋಗಿ, ಪುಣ್ಯವು ದೊರಕಿ ನೇರವಾಗಿ ದೇವಲೋಕಕ್ಕೆ/ಸ್ವರ್ಗಕ್ಕೆ ಹೋಗುತ್ತಾನೆ ಎಂಬ ನಂಬಿಕೆಯು ಜನಮನದಲ್ಲಿದೆ.

ಆದರೆ ಇಂತಹ ಯಾವುದೇ ಬಗೆಯ ಆಚರಣೆಗಳಿಂದ ವ್ಯಕ್ತಿಯು ದೇವಲೋಕಕ್ಕೆ/ಸ್ವರ್ಗಕ್ಕೆ ಹೋಗಲಾರನು ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು. ಏಕೆಂದರೆ ಇಹಲೋಕದಲ್ಲಿ ಒಳ್ಳೆಯ ಬದುಕನ್ನು ನಡೆಸಿದ ವ್ಯಕ್ತಿಗೆ ಮಾತ್ರ ಪರಲೋಕದಲ್ಲಿ ಒಳ್ಳೆಯದು ದೊರೆಯುತ್ತದೆ. ರಾಜಮುದ್ರೆಯಿಲ್ಲದ ನಾಣ್ಯಕ್ಕೆ ಸಮಾಜದಲ್ಲಿ ಬೆಲೆಯಿಲ್ಲದಂತೆ ಒಳ್ಳೆಯ ನಡೆನುಡಿಯಿಲ್ಲದ ವ್ಯಕ್ತಿಯ ಬದುಕಿಗೆ ಯಾವ ಲೋಕದಲ್ಲಿಯೂ ಬೆಲೆಯಿಲ್ಲವೆಂಬ ಸಂಗತಿಯನ್ನು ಈ ವಚನದಲ್ಲಿ "ಕರ್ತಾರನ ಕಮ್ಮಟ" ರೂಪಕದ ಮೂಲಕ ಹೇಳಲಾಗಿದೆ.)



೨೩) ಸದಾಚಾರ ಸದ್ಭಕ್ತಿಯಿಲ್ಲದವರನೊಲ್ಲನಯ್ಯಾ
ಅವರಾರಾಧನೆ ದಂಡ

ನಿಚ್ಚ ನಿಚ್ಚ ಪ್ರಾಯಶ್ಚಿತ್ತರನು ಒಲ್ಲ
ಕೂಡಲಸಂಗಮದೇವ
ಭೂಮಿಭಾರಕರ.

**ನಿತ್ಯ ಜೀವನದ ವ್ಯವಹಾರಗಳಲ್ಲಿ ಒಳ್ಳೆಯ ನಡೆನುಡಿಯಿಲ್ಲದ ವ್ಯಕ್ತಿಗಳು ಮಾಡುವ ಪೂಜೆಯನ್ನು ದೇವರು ಒಪ್ಪಿಕೊಳ್ಳುವುದಿಲ್ಲ ಎಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

**ಒಳ್ಳೆಯ ನಡೆನುಡಿ ಎಂದರೆ ವ್ಯಕ್ತಿಯು ಆಡುವ ಮಾತು ಮತ್ತು ಮಾಡುವ ಕೆಲಸವು ತನಗೆ ಒಳಿತನ್ನು ತರುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟುಮಾಡುವಂತಿರುವುದು.**

(ಸದಾಚಾರ=ಒಳ್ಳೆಯ ನಡತೆ/ಒಳ್ಳೆಯ ವರ್ತನೆ; ಸದ್ಭಕ್ತಿ+ಇಲ್ಲದ+ಅವರನ್+ ಒಲ್ಲನ್+ಅಯ್ಯಾ; ಸದ್ಭಕ್ತಿ=ದೇವರನ್ನು ಪೂಜಿಸಲು/ಒಲಿಸಿಕೊಳ್ಳಲು ವ್ಯಕ್ತಿಯು ಹೊಂದಿರಬೇಕಾದ ಒಳ್ಳೆಯ ನಡೆನುಡಿ; ಅವರನ್=ಅವರನ್ನು/ಅಂತಹ ವ್ಯಕ್ತಿಗಳನ್ನು; ಒಲ್=ಒಪ್ಪು/ಸಮ್ಮತಿಸು/ಪ್ರೀತಿಸು/ಮೆಚ್ಚು; ಒಲ್ಲನ್=ಒಪ್ಪುವುದಿಲ್ಲ/ಮೆಚ್ಚುವುದಿಲ್ಲ/ ನಿರಾಕರಿಸುತ್ತಾನೆ; ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ ;

ಸದಾಚಾರ ಸದ್ಭಕ್ತಿಯಿಲ್ಲದವರನೊಲ್ಲನಯ್ಯಾ=ಕುಟುಂಬದ ನೆಲೆ/ದುಡಿಮೆಯ ನೆಲೆ/ ಸಾರ್ವಜನಿಕ ನೆಲೆಗಳಲ್ಲಿ ಸಹಮಾನವರೊಡನೆ ಒಳ್ಳೆಯ ನಡೆನುಡಿಗಳಿಂದ ನಡೆದುಕೊಳ್ಳದ ವ್ಯಕ್ತಿಗಳನ್ನು ದೇವರು ಮೆಚ್ಚುವುದಿಲ್ಲ/ತನ್ನವರೆಂದು ಒಲಿಯುವುದಿಲ್ಲ.

ಏಕೆಂದರೆ ಶಿವಶರಣಶರಣೆಯರ ಪಾಲಿನ ದೇವರು ಕಲ್ಲು/ಮಣ್ಣು/ಲೋಹ/ ಮರದಿಂದ ಮಾಡಿದ ವಿಗ್ರಹವಾಗಿರಲಿಲ್ಲ. ವ್ಯಕ್ತಿಯ ಮಯ್ ಮನದಲ್ಲಿ ಅರಿವು ಮತ್ತು

ಸಾಮಾಜಿಕ ಎಚ್ಚರವನ್ನು ನೀಡುವ ಒಳದನಿಯನ್ನು ದೇವರೆಂದು ಅವರು ತಿಳಿದಿದ್ದರು. ವ್ಯಕ್ತಿಯು ಜೀವನದಲ್ಲಿ ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಉಂಟುಮಾಡುವಂತಹ ಒಳ್ಳೆಯ ನಡೆನುಡಿಗಳಲ್ಲಿ ದೇವರನ್ನು ಕಾಣುತ್ತಿದ್ದರು;

ಅವರ್+ಆರಾಧನೆ; ಅವರ=ಅಂತಹ ವ್ಯಕ್ತಿಗಳ; ಆರಾಧನೆ=ಪೂಜೆ/ಸೇವೆ/ಅರ್ಚನೆ; ದಂಡ=ಉಪಯೋಗವಿಲ್ಲದುದು/ಪ್ರಯೋಜನವಿಲ್ಲದುದು;

ಅವರಾರಾಧನೆ ದಂಡ=ಒಳ್ಳೆಯ ನಡೆನುಡಿಯಿಲ್ಲದ ವ್ಯಕ್ತಿಗಳು ಮಾಡುವ ದೇವರ ಪೂಜೆಯಿಂದ ಯಾರಿಗೂ ಯಾವೊಂದು ಬಗೆಯ ಪ್ರಯೋಜನವೂ ಇಲ್ಲ/ಯಾವುದೇ ಪರಿಣಾಮವಿಲ್ಲ;

ನಿಚ್ಚ=ಪ್ರತಿದಿನ/ಪ್ರತಿನಿತ್ಯ; ನಿಚ್ಚ ನಿಚ್ಚ=ಸದಾಕಾಲ/ನಿರಂತರವಾಗಿ/ಯಾವಾಗಲೂ; ಪ್ರಾಯಶ್ಚಿತ್ತ=ವ್ಯಕ್ತಿಯು ತಾನು ಮಾಡಿದ ತಪ್ಪನ್ನು ತಾನೇ ಅರಿತುಕೊಂಡು, ತನ್ನನ್ನು ತಾನೆ ದಂಡಿಸಿಕೊಂಡು/ತನ್ನ ಮಯ್ ಮನವನ್ನು ಬಹುಬಗೆಯಲ್ಲಿ ಹಿಂಸಿಸಿಕೊಂಡು, ಮತ್ತೆ ಅಂತಹ ತಪ್ಪನ್ನು ಮಾಡುವುದಿಲ್ಲವೆಂದು ತೀರ್ಮಾನಿಸುವುದು; ಪ್ರಾಯಶ್ಚಿತ್ತರನು=ತಮ್ಮನ್ನು ತಾವೇ ದಂಡಿಸಿಕೊಳ್ಳುವವರನ್ನು; ನಿಚ್ಚ ನಿಚ್ಚ ಪ್ರಾಯಶ್ಚಿತ್ತರನು=ಪದೇ ಪದೇ ಪ್ರಾಯಶ್ಚಿತ್ತ ಮಾಡಿಕೊಳ್ಳುವವರನ್ನು; ಒಲ್ಲ=ನಿರಾಕರಿಸುತ್ತಾನೆ/ದೂರವಿಡುತ್ತಾನೆ/ಒಪ್ಪಿಕೊಳ್ಳುವುದಿಲ್ಲ;

ಕೂಡಲಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು; ಭೂಮಿ=ಇಳೆ/ಲೋಕ/ ಜಗತ್ತು/ಪ್ರಪಂಚ; ಭಾರ=ಹೊರೆ/ತೂಕ/ಹೆಚ್ಚಿನ ತೂಕವುಳ್ಳದ್ದು; ಭಾರಕರು= ಹೊರೆಯಾದವರು;

ಭೂಮಿಭಾರಕ='ಭೂಮಿ'ಗೆ 'ಭಾರ'ವಾದವನು ಅಂದರೆ ಈ ಲೋಕದಲ್ಲಿ ಬಾಳಲು ಯೋಗ್ಯನಲ್ಲದವನು. ಇದೊಂದು ಬಯ್ಗುಳದ ನುಡಿಗಟ್ಟು. ಬಳಕೆಯಾದ ಸನ್ನಿವೇಶಕ್ಕೆ ತಕ್ಕಂತೆ ಈ ಬಯ್ಗುಳ ಪದ ಹಲವು ತಿರುಳುಗಳನ್ನು ಹೊಂದುತ್ತದೆ.

೧) ಏನೊಂದು ಕೆಲಸವನ್ನು ಮಾಡದೆ, ತಾನು ತಿನ್ನುವ ಅನ್ನ/ತೊಡುವ ಬಟ್ಟೆ/ ವಾಸಿಸುವ ಮನೆ ಮೊದಲುಗೊಂಡು ಜೀವನಕ್ಕೆ ಅಗತ್ಯವಾದುದೆಲ್ಲಕ್ಕೂ ಇತರರನ್ನು ಅವಲಂಬಿಸಿರುವ ವ್ಯಕ್ತಿ/ಇತರರಿಗೆ ಹೊರೆಯಾದವನು.

೨) ಸಹಮಾನವರಿಗೆ ಮತ್ತು ಸಮಾಜಕ್ಕೆ ಯಾವಾಗಲೂ ಕೇಡನ್ನು ಬಗೆಯುತ್ತಿರುವ ವ್ಯಕ್ತಿ.

೩) ತನ್ನ ವ್ಯಕ್ತಿತ್ವದ ಬಗ್ಗೆ ಕಿಂಚಿತ್ತು ಎಚ್ಚರವಿಲ್ಲದೆ ಬೇಜವಾಬ್ದಾರಿಯಿಂದ ಬಾಳುತ್ತಿರುವ ವ್ಯಕ್ತಿ.

ನಿಚ್ಚ ನಿಚ್ಚ ಪ್ರಾಯಶ್ಚಿತ್ತರನು ಒಲ್ಲ ಕೂಡಲಸಂಗಮದೇವ ಭೂಮಿಭಾರಕರ=ಮತ್ತೆ ಮತ್ತೆ ಮಾಡಿದ ತಪ್ಪನ್ನೇ ಮಾಡುತ್ತ, ಅದರ ಜತೆಗೆ ಇನ್ನೂ ಹೊಸಬಗೆಯ ತಪ್ಪುಗಳನ್ನು ಮಾಡುತ್ತ, ಪದೇ ಪದೇ ಪಶ್ಚಾತ್ತಾಪಗೊಂಡವನಂತೆ ನಟಿಸುವ ವ್ಯಕ್ತಿಯು ಎಂದಿಗೂ ಒಳ್ಳೆಯವನಾಗಿ/ಗುಣವಂತನಾಗಿ ಬಾಳಲಾರ. ಇಂತಹ ಕೆಟ್ಟ ವ್ಯಕ್ತಿಗಳನ್ನು ದೇವರು ಒಪ್ಪುವುದಿಲ್ಲ.

ತಪ್ಪನ್ನು ಮಾಡಿದ ವ್ಯಕ್ತಿಯು ಅದಕ್ಕೆ ದೇಹದಂಡನೆ ಇಲ್ಲವೇ ಇನ್ನಿತರ ಬಗೆಯ ಆಚರಣೆಗಳಿಂದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದರಿಂದ ಮಾಡಿದ ತಪ್ಪು ನಿವಾರಣೆಯಾಗುವುದಿಲ್ಲ. ಜೀವನದಲ್ಲಿ ಒಂದಲ್ಲ ಒಂದು ಬಗೆಯ ತಪ್ಪನ್ನು ಮಾಡದ ವ್ಯಕ್ತಿಯೇ ಇಲ್ಲ. ಆದ್ದರಿಂದ ತಪ್ಪನ್ನು ಮಾಡಿದ ವ್ಯಕ್ತಿಯು ತನ್ನ ದೇಹ ದಂಡನೆಗೆ ಬದಲಾಗಿ ಮತ್ತೆ ಅಂತಹ ತಪ್ಪನ್ನು ಮಾಡದಿರುವ ತೀರ್ಮಾನವನ್ನು ಕಯ್ಗೊಂಡು, ತನ್ನ ನಡೆನುಡಿಗಳ ಬಗ್ಗೆ ಎಚ್ಚರವನ್ನು ಹೊಂದಿ, ಮತ್ತೊಮ್ಮೆ ಯಾವುದೇ ಬಗೆಯ ತಪ್ಪುಗಳು ತನ್ನಿಂದ ಆಗದಂತೆ ಒಳ್ಳೆಯ ನಡೆನುಡಿಗಳಿಂದ ಬಾಳಬೇಕು ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು.)



೨೪) ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು

ಸಿರಿಗರ ಹೊಡೆದವರ ನುಡಿಸಲು ಬಾರದು
ನೋಡಯ್ಯಾ

ಬಡತನವೆಂಬ ಮಂತ್ರವಾದಿ ಹೊಗಲು
ಒಡನೆ ನುಡಿವರಯ್ಯಾ
ಕೂಡಲಸಂಗಮದೇವಾ.

**ಅಪಾರವಾದ ಆಸ್ತಿಪಾಸ್ತಿ/ಹಣಕಾಸು/ಒಡವೆ ವಸ್ತುಗಳಿಗೆ ಒಡೆಯರಾಗಿ ಸಿರಿವಂತಿಕೆಯಿಂದ ಮೆರೆಯುತ್ತಿರುವ ವ್ಯಕ್ತಿಗಳ ಸೊಕ್ಕಿನಿಂದ ಕೂಡಿದ ವರ್ತನೆಯು ಯಾವಾಗ ಕೊನೆಗೊಳ್ಳುತ್ತದೆ ಎಂಬುದನ್ನು ಈ ವಚನದಲ್ಲಿ ಹೇಳಲಾಗಿದೆ.**

(ಹಾವು=ಉರಗ/ಸರ್ಪ/ನೆಲದ ಮೇಲೆ ಹರಿದಾಡುವ ಒಂದು ಬಗೆಯ ಜಂತು; ತಿನ್=ಕಚ್ಚು/ಕಡಿ; ತಿಂದವರ=ಕಚ್ಚಿದವರನ್ನು/ಕಡಿದವರನ್ನು; ಹಾವು ತಿಂದವರ=ಹಾವು ಕಚ್ಚಿದವರನ್ನು/ಹಾವು ಕಡಿದವರನ್ನು; ನುಡಿ=ಮಾತು/ಸೊಲ್ಲು; ನುಡಿಸು=ಮಾತನಾಡಿಸು; ಬಹುದು=ಆಗುವುದು;

ಹಾವು ತಿಂದವರ ನುಡಿಸಬಹುದು=ಹಾವು ಕಚ್ಚಿ, ಮಯ್ಯಲ್ಲೆಲ್ಲಾ ನಂಜು ಹರಡುತ್ತ, ಸಾವು ಬದುಕಿನ ನಡುವೆ ಸಿಲುಕಿ ಕಂಗಾಲಾಗಿರುವ ವ್ಯಕ್ತಿಯನ್ನು ಮಾತನಾಡಿಸಿದರೆ, ಅಂತಹ ಸಂಕಟದ ಸಮಯದಲ್ಲಿಯೂ ಅವನು ನಮ್ಮೊಡನೆ ಒಂದೆರಡು ಮಾತನಾಡುತ್ತಾನೆ;

ಗರ=ದೆವ್ವ/ಪಿಶಾಚಿ; ಆಯುಸ್ಸು ತುಂಬದೆ ಹರೆಯ ಇಲ್ಲವೇ ನಡುವಯಸ್ಸಿನಲ್ಲಿ ಅವಗಡದಿಂದಾಗಿ/ರೋಗರುಜಿನಗಳಿಂದಾಗಿ ಸತ್ತವರ ಜೀವವು ದೆವ್ವವಾಗಿ ಅಲೆಯುತ್ತಿರುತ್ತದೆ. ದೆವ್ವವು ಬದುಕಿರುವ ವ್ಯಕ್ತಿಗಳ ಮಯ್ ಮನವನ್ನು ಹೊಕ್ಕು, ತಾನು ಜೀವಂತ ವ್ಯಕ್ತಿಯಾಗಿದ್ದಾಗ ಆಸೆಪಟ್ಟಿದ್ದೆಲ್ಲವನ್ನೂ ಈಡೇರಿಸಿಕೊಳ್ಳಲು

ಪ್ರಯತ್ನಿಸುತ್ತದೆಯೆಂಬ ನಂಬಿಕೆಯು ಜನಮನದಲ್ಲಿ ನೆಲೆಸಿದೆ. ಈ ರೀತಿಯಾದಾಗ ಅವನಿಗೆ/ಅವಳಿಗೆ 'ಗರಮೆಟ್ಕೊಂಡಿದೆ/ದೆವ್ವ ಹಿಡ್ಕೊಂಡಿದೆ' ಎಂದು ಜನರು ಮಾತನಾಡಿಕೊಂಡು, ವ್ಯಕ್ತಿಗೆ ಹಿಡಿದಿರುವ ದೆವ್ವವನ್ನು ಮಾಟಕೂಟಗಳ ಆಚರಣೆಯಿಂದ ಓಡಿಸಲು ಪ್ರಯತ್ನಿಸುತ್ತಾರೆ. ಆದರೆ ಆರೋಗ್ಯ 'ವಿಜ್ಞಾನ'ದ ನೆಲೆಯಿಂದ ನೋಡಿದಾಗ ವ್ಯಕ್ತಿಯು ನಾನಾ ಕಾರಣಗಳಿಂದಾಗಿ ಮಾನಸಿಕ ರೋಗಿಯಾಗಿ ತನ್ನ ಮಯ್ ಮನವನ್ನು ಹತೋಟಿಯಲ್ಲಿಟ್ಟುಕೊಳ್ಳಲಾಗದೆ ಪರಿತಪಿಸುತ್ತಿರುವುದನ್ನು ದೆವ್ವ ಮೆಟ್ಟುಕೊಂಡಿದೆ ಎಂದು ಜನರು ತಪ್ಪಾಗಿ ತಿಳಿದಿರುವುದು ಕಂಡುಬಂದಿದೆ;

ಹೊಡಿ=ಮಯ್ ಮೇಲೆ ಬರುವುದು/ಮೆಟ್ಟಿಕೊಳ್ಳುವುದು/ಆವರಿಸಿಕೊಳ್ಳುವುದು; ಗರ ಹೊಡೆದವರ=ದೆವ್ವ ಮೆಟ್ಟಿಕೊಂಡವರನ್ನು/ಪಿಶಾಚಿ ಹಿಡಿದುಕೊಂಡವರನ್ನು;

ಗರ ಹೊಡೆದವರ ನುಡಿಸಬಹುದು=ತನ್ನ ಮಯ್ ಮನದ ಮೇಲಣ ಹತೋಟಿಯನ್ನು ಕಳೆದುಕೊಂಡು, ತನ್ನ ಸುತ್ತಲೂ ಏನು ನಡೆಯುತ್ತಿದೆ ಎಂಬ ಅರಿವು ಮತ್ತು ಎಚ್ಚರವಿಲ್ಲದೆ ಬಾಯಿಗೆ ಬಂದಂತೆ ಅರಚಾಡುತ್ತಿರುವ/ಎದ್ದು ಬಿದ್ದು ಒದ್ದಾಡುತ್ತಿರುವ ದೆವ್ವ ಹಿಡಿದ ವ್ಯಕ್ತಿಯನ್ನು ಮಾತನಾಡಿಸಿದರೆ, ತಾನು ಯಾರೆಂಬುದನ್ನೇ ಮರೆತಿರುವ ಆ ವ್ಯಕ್ತಿಯು ಕೂಡ ನಮ್ಮೊಡನೆ ಒಂದೆರಡು ನುಡಿಗಳನ್ನಾಡುತ್ತಾನೆ;

ಸಿರಿ=ಸಂಪತ್ತು/ಹಣಕಾಸು/ಒಡವೆ ವಸ್ತು/ಆಸ್ತಿಪಾಸ್ತಿ; ಸಿರಿಗರ=ಸಿರಿ ಎಂಬ ದೆವ್ವ/ ಪಿಶಾಚಿ; ನುಡಿಸಲು=ಮಾತನಾಡಿಸಲು; ಬಾರದು=ಆಗುವುದಿಲ್ಲ ; ನೋಡು+ಅಯ್ಯಾ; ನೋಡು=ಗಮನಿಸು/ವಿಚಾರಮಾಡು/ತಿಳಿ/ಅರಿ;

ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ=ಸಿರಿಯೆಂಬ ದೆವ್ವ ಮೆಟ್ಟಿಕೊಂಡವರನ್ನು ಮಾತನಾಡಿಸಲು ಆಗುವುದಿಲ್ಲ. ಸಿರಿವಂತರಾಗಿ ಬಾಳುತ್ತಿರುವ ವ್ಯಕ್ತಿಗಳಲ್ಲಿ ಬಹುತೇಕ ಮಂದಿ ಅಹಂಕಾರದ ನಡೆನುಡಿಗಳಿಂದ ಕೂಡಿರುವ ವಾಸ್ತವ ಸಂಗತಿಯು ಸಮಾಜದ ಎಲ್ಲೆಡೆಯಲ್ಲಿ ಎಲ್ಲಾ ಕಾಲದಲ್ಲಿಯೂ ಕಂಡುಬರುತ್ತದೆ.

'ಸಿರಿಗರ' ಎಂಬ ಈ ನುಡಿಗಟ್ಟು ಒಂದು ರೂಪಕವಾಗಿ ಬಳಕೆಯಾಗಿದೆ. ಸಿರಿಯೆಂಬುದೇ ಒಂದು ಗರವಾಗಿದೆ/ದೆವ್ವವಾಗಿದೆ. ಅಂದರೆ ಸಿರಿವಂತಿಕೆಯನ್ನು ಹೊಂದಿರುವ ವ್ಯಕ್ತಿಯು ನಾನೇ ಎಲ್ಲರಿಗಿಂತ ದೊಡ್ಡವನು/ನನ್ನ ಬಳಿ ಇರುವ ಸಂಪತ್ತಿನಿಂದ ಏನನ್ನು ಬೇಕಾದರೂ ಮಾಡಬಲ್ಲೆನು/ಹಣದ ಮುಂದೆ ಬೇರೆಯದೆಲ್ಲವೂ ಸೊನ್ನೆ/ ಯಾವುದೇ ವಸ್ತುವನ್ನು ಇಲ್ಲವೇ ಯಾವ ವ್ಯಕ್ತಿಯನ್ನು ಬೇಕಾದರೂ ಕೊಂಡುಕೊಳ್ಳಬಲ್ಲೆನು ಎಂಬ ಒಳಮಿಡಿತಗಳಿಂದ ಕೂಡಿ ಸೊಕ್ಕಿನಿಂದ ಎಲ್ಲರನ್ನೂ ಕಡೆಗಣಿಸಿ, ಮನಬಂದಂತೆ ಮಾತನಾಡುತ್ತಾನೆ ಮತ್ತು ನಡೆದುಕೊಳ್ಳುತ್ತಾನೆ. ಸಿರಿವಂತಿಕೆಯಿಂದ ಮೆರೆಯುತ್ತಿರುವ

ವ್ಯಕ್ತಿಯು ದೆವ್ವ ಮೆಟ್ಟಿಕೊಂಡವನು ಹೇಗೆ ತನ್ನ ಮಯ್ ಮನವನ್ನು ಹತೋಟಿಯಲ್ಲಿಟ್ಟು ಕೊಳ್ಳಲಾಗದೆ ವರ್ತಿಸುತ್ತಾನೆಯೋ ಅಂತೆಯೇ ಸಿರಿಗರ ಹೊಡೆದ ವ್ಯಕ್ತಿಯು ಯಾರ ಅಂಕೆಶಂಕೆಯಿಲ್ಲದೆ/ಯಾರನ್ನು ಲೆಕ್ಕಿಸದೆ ಮನಬಂದಂತೆ ವರ್ತಿಸುತ್ತಾನೆ. ಇಂತಹ ವ್ಯಕ್ತಿಯ ಜತೆ ಮಾತನಾಡಲು ಆಗುವುದಿಲ್ಲ;

ಬಡತನ+ಎಂಬ; ಬಡತನ=ಉಣಲಿಲ್ಲದೆ, ಉಡಲಿಲ್ಲದೆ, ವಾಸಿಸಲು ನೆಲೆಯಿಲ್ಲದೆ ವ್ಯಕ್ತಿಯು ಹಸಿವು ಮತ್ತು ಅಪಮಾನದ ಸಂಕಟದಿಂದ ಇರುವುದು; ಎಂಬ=ಎನ್ನುವ; ಮಂತ್ರ=ದೇವರು ಇಲ್ಲವೇ ಅಗೋಚರ ಶಕ್ತಿಯ ಸ್ವರೂಪ, ಗುಣ ಮತ್ತು ಮಹಿಮೆಯನ್ನು ಕೊಂಡಾಡುವ ನುಡಿಗಳು; ಮಂತ್ರವಾದಿ=ಮಂತ್ರಗಳನ್ನು ಉಚ್ಚರಿಸುತ್ತ, ಕೆಲವು ಬಗೆಯ ಆಚರಣೆಗಳ ಮೂಲಕ ವ್ಯಕ್ತಿಗೆ ಹಿಡಿದಿರುವ ದೆವ್ವವನ್ನು ಓಡಿಸುವವನು; ಮಂತ್ರ ತಂತ್ರ, ಮಾಟ ಕೂಟಗಳ ಮೂಲಕ ಇರುವುದನ್ನು ಇಲ್ಲವಾಗಿಸುವ, ಇಲ್ಲದ್ದನ್ನು ಕಣ್ಣೆದುರಿಗೆ ಬರುವಂತೆ ಮಾಡುವ ಕಸುವುಳ್ಳವನು ಮಂತ್ರವಾದಿ ಎಂಬ ನಂಬಿಕೆಯು ಜನಮನದಲ್ಲಿದೆ.

ಆದರೆ ವಾಸ್ತವದಲ್ಲಿ ಮಂತ್ರವಾದಿಯು ಇಂದ್ರಜಾಲ/ಕಣ್ಕಟ್ಟಿನ ವಿದ್ಯೆಯ ಮೂಲಕ ಈ ರೀತಿ ನೋಡುವವರು ನಂಬುವ ರೀತಿಯಲ್ಲಿ ಕ್ರಿಯೆಗಳನ್ನು ಮಾಡುವ ಕುಶಲತೆಯನ್ನು/ ಕಯ್ ಚಳಕವನ್ನು ಹೊಂದಿರುತ್ತಾನೆ; ಹೊಗು=ಒಳಸೇರು/ಪ್ರವೇಶಿಸು/ಕೂಡಿಕೊಳ್ಳು/ ಸೇರು; ಹೊಗಲು=ಬಂದು ಸೇರಿಕೊಂಡಾಗ/ಮೇಲೆ ಬಿದ್ದಾಗ; ಒಡನೆ=ಮರು ಗಳಿಗೆಯಲ್ಲಿ/ಕೂಡಲೆ; ನುಡಿವರ್+ಅಯ್ಯಾ; ನುಡಿವರ್=ಮಾತನಾಡುತ್ತಾರೆ;

ಬಡತನವೆಂಬ ಮಂತ್ರವಾದಿ ಹೊಗಲು=ಈ ಪದಕಂತೆಯು ಒಂದು ರೂಪಕವಾಗಿ ಬಳಕೆಯಾಗಿದೆ. ಸಿರಿವಂತಿಕೆಯಿಂದ ಮಯ್ ಮರೆತು ಮೆರೆಯುತ್ತಿದ್ದ ವ್ಯಕ್ತಿಯ ಜೀವನದಲ್ಲಿ ನಡೆದ ಕೇಡಿನ/ಹಾನಿಯ ಪ್ರಸಂಗಗಳಿಂದಾಗಿ ಅವನ ಸಂಪತ್ತೆಲ್ಲವೂ ಕಯ್ ಬಿಟ್ಟುಹೋಗಿ, ಇದ್ದುದೆಲ್ಲವನ್ನೂ ಕಳೆದುಕೊಂಡು ಕಡುಬಡತನದ ನೆಲೆಗೆ ಬರುತ್ತಾನೆ; ಕೂಡಲಸಂಗಮದೇವಾ=ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತನಾಮ;

ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರಯ್ಯಾ ಕೂಡಲ ಸಂಗಮದೇವಾ=ಸಿರಿವಂತಿಕೆಯಿದ್ದಾಗ ಇತರರನ್ನು ಒಲವು ನಲಿವುಗಳಿಂದ ಕಂಡು ಮಾತನಾಡಿಸದೇ ಇದ್ದ ವ್ಯಕ್ತಿಯು ಬಡತನಕ್ಕೆ ಸಿಲುಕಿದಾಗ, ಅವನಲ್ಲಿದ್ದ ಅಹಂಕಾರದ ವರ್ತನೆಗಳೆಲ್ಲವೂ ಇಲ್ಲವಾಗಿ, ಇತರರೊಡನೆ ಸಹಜವಾಗಿ ಮತ್ತು ಸರಳವಾಗಿ ನಡೆದುಕೊಳ್ಳತೊಡಗುತ್ತಾನೆ ಎಂಬ ಸಾಮಾಜಿಕ ವಾಸ್ತವವನ್ನು ವಚನಕಾರನು ಗುರುತಿಸಿದ್ದಾನೆ.)



೨೫) ಹಾವಾಡಿಗನು ಮೂಕೊರತಿಯು
ತನ್ನ ಕೈಯಲ್ಲಿ ಹಾವು

ಮಗನ ಮದುವೆಗೆ
ಶಕುನವ ನೋಡ ಹೋಹಾಗ

ಇದಿರಲೊಬ್ಬ ಮೂಕೊರತಿಯ ಹಾವಾಡಿಗನ ಕಂಡು
ಶಕುನ ಹೊಲ್ಲೆಂಬ ಚದುರನ ನೋಡಾ

ತನ್ನ ಸತಿ ಮೂಕೊರತಿ
ತನ್ನ ಕೈಯಲ್ಲಿ ಹಾವು
ತಾನು ಮೂಕೊರೆಯ

ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯನೇನೆಂಬೆ ಕೂಡಲಸಂಗಮದೇವಾ.

ಈ ವಚನವನ್ನು ಎರಡು ನೆಲೆಗಳಲ್ಲಿ ವಿವರಿಸಿಕೊಳ್ಳಬಹುದು.

೧) ತನ್ನಲ್ಲಿರುವ ಅರೆಕೊರೆಗಳನ್ನು ತಾನು ಅರಿತುಕೊಳ್ಳದೆ, ಇತರರ ಅರೆಕೊರೆಗಳನ್ನು ಎತ್ತಿ ಆಡುವ ವ್ಯಕ್ತಿಯ ಇಬ್ಬಂದಿತನವನ್ನು ಈ ವಚನದಲ್ಲಿ ಹೇಳಲಾಗಿದೆ. ಇಬ್ಬಂದಿತನ ಎಂದರೆ ತನಗೆ ಒಂದು ನೀತಿ ಬೇರೆಯವರಿಗೆ ಮತ್ತೊಂದು ನೀತಿ ಎಂಬ ನಿಲುವನ್ನು ಹೊಂದಿರುವುದು.

೨) ತಲೆತಲಾಂತರಗಳಿಂದಲೂ ಜನಸಮುದಾಯದ ಮನದಲ್ಲಿ ನೆಲೆಗೊಂಡಿರುವ ಶಕುನಗಳನ್ನು ನಂಬಿಕೊಂಡು ಬಾಳುತ್ತಿರುವ ವ್ಯಕ್ತಿಯ ತಿಳಿಗೇಡಿತನದ ವರ್ತನೆಯನ್ನು ಈ ವಚನದಲ್ಲಿ ಹೇಳಲಾಗಿದೆ.

(ಹಾವು+ಆಡಿಗ; ಹಾವು=ಉರಗ/ಸರ್ಪ/ನೆಲದ ಮೇಲೆ ಹರಿದಾಡುವ ಒಂದು ಬಗೆಯ ಜಂತು ; ಆಡಿಗ=ಆಡಿಸುವವನು; ಹಾವಾಡಿಗ=ಜನಗಳ ಮುಂದೆ ಹಾವು

ಆಡಿಸುವುದನ್ನು ಒಂದು ಕಸುಬನ್ನಾಗಿ ಮಾಡಿಕೊಂಡಿರುವವನು; ಮೂಗು+ಕೊರತಿ; ಮೂಗು=ಉಸಿರಾಡಲು ಮತ್ತು ವಾಸನೆಯನ್ನು ಗ್ರಹಿಸುವ ಒಂದು ಅಂಗ/ಅಯ್ದು ಇಂದ್ರಿಯಗಳಲ್ಲಿ ಒಂದು; ಕೊರೆ=ಅಯ್ಬು/ಕುಂದು/ಲೋಪ; ಕೊರತಿ=ಅಯ್ಬುಳ್ಳವಳು/ ಕುಂದುಳ್ಳವಳು; ಮೂಕೊರತಿ=ಮೂಗಿನ ಆಕಾರ ಸರಿಯಿಲ್ಲದಿರುವ ಹೆಂಗಸು/ ಅಪ್ಪಚ್ಚಿಯಾದಂತಿರುವ ಮೂಗಿನವಳು; ತಸ್ನ=ಹಾವಾಡಿಗನ; ಮಗ=ಪುತ್ರ/ತನುಜ;

ಮದುವೆ=ವಿವಾಹ/ಲಗ್ನ; ಶಕುನ=ಯಾವುದೇ ಒಂದು ಕೆಲಸವು ಆಗುತ್ತದೆ/ ಆಗುವುದಿಲ್ಲ ಎಂಬ ಸುಳಿವನ್ನು/ಸೂಚನೆಯನ್ನು ನೀಡುವುದು. ವ್ಯಕ್ತಿಯು ಒಂದು ಕೆಲಸಕ್ಕೆ ಹೊರಟಾಗ ಅವನ ಎದುರಿನಲ್ಲಿ ಕೆಲವು ಬಗೆಯ ವಸ್ತು/ಜೀವಿ/ವ್ಯಕ್ತಿಗಳು ಕಾಣಿಸಿಕೊಂಡರೆ, ತಾನು ಹೋಗುತ್ತಿರುವ ಕೆಲಸ ಚೆನ್ನಾಗಿ ನೆರವೇರುತ್ತದೆ ಇಲ್ಲವೇ ನೆರವೇರುವುದಿಲ್ಲ ಎಂಬ ನಂಬಿಕೆಯು ತಲೆತಲಾಂತರಗಳಿಂದಲೂ ಜನಮನದಲ್ಲಿದೆ. ಇಂತಹ ನಂಬಿಕೆಗೆ ಒಳಗಾದ ವ್ಯಕ್ತಿಗಳು ಕೆಟ್ಟದ್ದೆಂದು ನಂಬಿರುವ ಶಕುನ ಕಂಡುಬಂದರೆ ತಾವು ಕಯ್ಗೊಂಡಿರುವ ಕೆಲಸವನ್ನು ಅಂದಿನ ಮಟ್ಟಿಗೆ ಕಯ್ ಬಿಟ್ಟು, ಕೆಲಸವನ್ನು ಮತ್ತೊಂದು ದಿನಕ್ಕೆ ಮುಂದೂಡುತ್ತಾರೆ. ಕೆಲವರು ಆ ಕೆಲಸವನ್ನು ಮತ್ತೆ ಮಾಡಲು ಹೋಗುವುದಿಲ್ಲ. ಇದು ಕೇವಲ ಜನಮನದ ನಂಬಿಕೆಯೇ ಹೊರತು, ವಾಸ್ತವದಲ್ಲಿ ಜರುಗುವುದಿಲ್ಲ. ನೋಡ ಹೋಹಾಗ=ನೋಡಲು ಹೋಗುವಾಗ;

ಮಗನ ಮದುವೆಗೆ ಶಕುನವ ನೋಡ ಹೋಹಾಗ=ಮಗನ ಮದುವೆಯನ್ನು ಮಾಡಲು ಒಳ್ಳೆಯ ಕಾಲ ಮತ್ತು ದಿನವನ್ನು ಗೊತ್ತುಪಡಿಸಲೆಂದು ಪಂಚಾಂಗವನ್ನು ನೋಡಿ ಹೇಳುವ ಪುರೋಹಿತರ/ಜೋಯಿಸರ/ಅಯ್ಯನವರ ಬಳಿಗೆ ಹೋಗುತ್ತಿದ್ದಾಗ;

ಇದರಲಿ+ಒಬ್ಬ; ಇದಿರ್=ಎದುರಾಗಿ/ಮುಂದುಗಡೆ; ಇದಿರಲಿ=ಎದುರಿನಲ್ಲಿ/ ಮುಂದುಗಡೆಯಲ್ಲಿ; ಕಂಡು=ನೋಡಿ/ಗಮನಿಸಿ; ಹೊಲ್+ಎಂಬ; ಹೊಲ್=ಕೆಟ್ಟದ್ದು/ ಒಳ್ಳೆಯದಲ್ಲದ್ದು ; ಎಂಬ=ಎನ್ನುವ/ಎಂದು ಹೇಳುವ;

ಶಕುನ ಹೊಲ್ಲೆಂಬ=ಕೆಟ್ಟ ಶಕುನ/ಅಪಶಕುನವಾಯಿತು ಎಂದು ಹೇಳುವ;

ಚದುರ=ತಿಳುವಳಿಕೆಯುಳ್ಳವನು/ಜಾಣ; ನೋಡು=ಕಾಣು/ಗಮನಿಸು; ನೋಡಾ=ನೋಡುವಂತಹವನಾಗು;

ಶಕುನ ಹೊಲ್ಲೆಂಬ ಚದುರನ ನೋಡಾ=ಕೆಟ್ಟ ಶಕುನವಾಯಿತೆಂದು ಹೇಳುತ್ತಿರುವ ಚದುರನನ್ನು ನೋಡು. ಈ ಸನ್ನಿವೇಶದಲ್ಲಿ 'ಚದುರ' ಎಂಬ ಪದವು 'ತಿಳಿಗೇಡಿ/ ಅರಿವಿಲ್ಲದವನು' ಎಂಬ ತಿರುಳಿನಲ್ಲಿ ಬಳಕೆಯಾಗಿದೆ.

ಏಕೆಂದರೆ ಯಾವುದೇ ಒಂದು ವಸ್ತು/ಜೀವಿ/ವ್ಯಕ್ತಿಯು ಎದುರಾಗಿ ಬರುವುದಕ್ಕೂ ಮುಂದೆ ನಡೆಯಲಿರುವ ಕೆಲಸಕ್ಕೂ ಯಾವುದೇ ಬಗೆಯ ನಂಟು ಇರುವುದಿಲ್ಲ. ಕಾರ್ಯ

ಕಾರಣಗಳ ನಂಟನ್ನು ಅರಿಯದೆ, ಹಿಂದಿನಿಂದಲೂ ಕೇಳಿಕೊಂಡು ಬಂದಿರುವ ಮಾತುಗಳಲ್ಲಿರುವ ಸರಿ/ತಪ್ಪನ್ನು ಇಲ್ಲವೇ ನಿಜ/ಸುಳ್ಳನ್ನು ಒರೆಹಚ್ಚಿ ನೋಡದಿರುವುದರಿಂದ ಜನರು ಈ ರೀತಿ ತಿಳಿಗೇಡಿತನದಿಂದ ನಡೆದುಕೊಳ್ಳುತ್ತಿದ್ದಾರೆ.

ಈ ಪ್ರಸಂಗದಲ್ಲಿ ಎದುರಿಗೆ ಬಂದ ಹಾವಾಡಿಗ ಮತ್ತು ಮೂಕೊರತಿಯನ್ನು ಅಪಶಕುನದ ಸಂಕೇತಗಳೆಂದು ನಂಬಲಾಗಿದೆ. ಹಾವಾಡಿಗನು ಹಾವನ್ನಾಡಿಸುವ ಕಸುಬಿನ ಮೂಲಕ ತನ್ನ ಜೀವನವನ್ನು ರೂಪಿಸಿಕೊಂಡಿರುವ ವ್ಯಕ್ತಿ. ಆತನ ಕಯ್ಯಲ್ಲಿರುವ ಹಾವನ್ನು ನಾಗದೇವತೆಯೆಂದು ಜನಸಮುದಾಯವು ಪೂಜಿಸುತ್ತದೆ. ಮೂಕೊರತಿಯ ಮೂಗಿನ ಆಕಾರವು ಆಕೆಯ ಹುಟ್ಟಿನಿಂದಲೇ ಬಂದಿರಬಹುದು ಇಲ್ಲವೇ ಆಕೆಯ ಜೀವನದಲ್ಲಿ ನಡೆದ ಅವಗಡದಿಂದ ಮೂಗಿಗೆ ದೊಡ್ಡ ಪೆಟ್ಟು ಬಿದ್ದು ಅಪ್ಪಚ್ಚಿಯಾಗಿರಬಹುದು.

ವಾಸ್ತವದ ಸಂಗತಿಗಳು ಹೀಗಿರುವಾಗ, ಹಾವಾಡಿಗ ಮತ್ತು ಮೂಕೊರತಿಯನ್ನು ಅಪಶಕುನವೆಂದು ಜನಸಮುದಾಯವು ನಂಬಿರುವುದಕ್ಕೆ ಕಾರಣವನ್ನು ತಿಳಿಯಬೇಕಾದರೆ ನಮ್ಮ ಸಮಾಜದ ರಚನೆಯನ್ನು ನೋಡಬೇಕಾಗುತ್ತದೆ.

ನಮ್ಮ ಸಮಾಜವು ಮೇಲು/ಕೀಳಿನ ಮೆಟ್ಟಿಲುಗಳಿಂದ ಕೂಡಿರುವ ಜಾತಿ ತಾರತಮ್ಯದಿಂದ ಕೂಡಿದೆ. ಈ ಜಾತಿ ತಾರತಮ್ಯವು ಪ್ರತಿಯೊಬ್ಬ ವ್ಯಕ್ತಿಯ ಮನದಲ್ಲಿಯೂ "ನಾನು ಇನ್ನೊಬ್ಬನಿಗಿಂತ ಮೇಲು ಎಂಬ ಇಲ್ಲವೇ ಕೀಳು" ಎಂಬ ಮೇಲರಿಮೆ/ಕೀಳರಿಮೆಯ ಒಳಮಿಡಿತವನ್ನು ಯಾವಾಗಲೂ ಮೂಡಿಸುತ್ತಿರುತ್ತದೆ. ಇದೇ ರೀತಿಯಲ್ಲಿ ಕಸುಬುಗಳಲ್ಲಿಯೂ ಕೆಲವನ್ನು ಒಳ್ಳೆಯದು/ಉತ್ತಮವೆಂದು, ಮತ್ತೆ ಕೆಲವನ್ನು ಕೆಟ್ಟದ್ದು/ಹೊಲಸು ಎಂಬ ನಿಲುವನ್ನು ಹೊಂದಲಾಗಿದೆ. ಜನಸಮುದಾಯವು ಹಾವಾಡಿಗನ ಜಾತಿಯನ್ನು ಮತ್ತು ಕಸುಬನ್ನು ಕೀಳು ಎಂದು ಪರಿಗಣಿಸಿರುವುದರಿಂದ ಅವನು ಅಪಶಕುನದ ಸಂಕೇತವಾಗಿದ್ದಾನೆ.

ವ್ಯಕ್ತಿಯ ದೇಹದ ಆಕಾರದಲ್ಲಿ ಕಂಡುಬರುವ ಅರೆಕೊರೆಗಳಿಗೆ ಹಿಂದಿನ ಜನ್ಮದ ಪಾಪಪುಣ್ಯಗಳು ಕಾರಣವೆಂಬ ನಂಬಿಕೆಯು ಜನಮನದಲ್ಲಿದೆ. ಆದ್ದರಿಂದ ಮೂಕೊರತಿಯು ಅಪಶಕುನದ ಸಂಕೇತವಾಗಿದ್ದಾಳೆ. ಸಮಾಜದಲ್ಲಿನ ಈ ಬಗೆಯ ನಂಬಿಕೆಗಳ ನೆಲೆಯಲ್ಲಿ ಬೆಳೆದು ಬಂದಿರುವ ಹಾವಾಡಿಗನ ವರ್ತನೆಯು ತನ್ನ ಬಗ್ಗೆ ತಾನು ಹೊಂದಿರುವ ಕೀಳರಿಮೆ ಮಾತ್ರವಲ್ಲದೆ, ತಿಳಿಗೇಡಿತನದಿಂದ ಕೂಡಿದೆ. ಜಾತಿಯ ಮೇಲು/ಕೀಳು, ಪುನರ್ ಜನ್ಮ ಮತ್ತು 'ಕರ್ಮಸಿದ್ಧಾಂತ'ಗಳು ಜನಮನದಲ್ಲಿ ಇಂತಹ ನೂರಾರು ಬಗೆಯ ಕೀಳರಿಮೆಯನ್ನು ನೆಲೆಗೊಳಿಸಿರುವುದನ್ನು ಈ ಬಗೆಯ ಪ್ರಸಂಗದಲ್ಲಿ ಕಾಣಬಹುದು;

ಸತಿ=ಹೆಂಡತಿ/ಮಡದಿ/ಪತ್ನಿ; ತನ್ನ ಸತಿ ಮೂಕೊರತಿ=ತನ್ನ ಹೆಂಡತಿಯು ಮೂಕೊರೆಯಳಾಗಿದ್ದಾಳೆ; ತಾನು ಮೂಕೊರೆಯ=ತಾನು ಅಯ್ಬಾಗಿರುವ ಮೂಗುಳ್ಳವನು; ಭಿನ್ನ+ಅನ್+ಅರಿಯದೆ; ತನ್ನ=ತನ್ನ ಮತ್ತು ತನ್ನ ಹೆಂಡತಿಯ; ಭಿನ್ನ=ಕುಂದು/ಕೊರತೆ/ಲೋಪ; ಅನ್=ಅನ್ನು; ಅರಿ=ತಿಳಿ; ಅರಿಯದೆ=ತಿಳಿಯದೆ/ಗಮನಿಸಿದೆ;

ತನ್ನ ಭಿನ್ನವನರಿಯದೆ=ತನ್ನ ನಿಜರೂಪದ ಇರುವಿಕೆಯನ್ನು ತಿಳಿಯದೆ/ಹಾವಾಡಿಗನು ತನ್ನ ಕಸುಬು ಮತ್ತು ತನ್ನ ಹೆಂಡತಿಯು ಮೂಕೊರೆಯಳು ಎಂಬುದನ್ನು ಗಮನಿಸದೆ; ಅನ್ಯರನ್+ಎಂಬ; ಅನ್ಯ=ಬೇರೆಯ/ಮತ್ತೊಬ್ಬ; ಅನ್ಯರನ್=ಇತರರನ್ನು/ಬೇರೆಯವರನ್ನು; ಕುನ್ನಿ+ಅನ್+ಏನ್+ಎಂಬೆ; ಕುನ್ನಿ=ನಾಯಿ/ನಾಯಿ ಮರಿ. ಕುನ್ನಿ ಎಂಬ ಪದ ಒಂದು ಬಯ್ಗುಳವಾಗಿ ಬಳಕೆಯಾಗಿದೆ. ವ್ಯಕ್ತಿಯ ನಡೆನುಡಿಯಲ್ಲಿನ ಕೆಟ್ಟದ್ದನ್ನು ನಿಂದಿಸುವಾಗ, ಆತನನ್ನು ನಾಯಿಗೆ ಹೋಲಿಸಿ ಬಯ್ಯುತ್ತಾರೆ;

ಅನ್ಯರನೆಂಬ ಕುನ್ನಿಯನ್=ಇತರರನ್ನು ಕೀಳಾಗಿ ಕಾಣುವ ನೀಚವ್ಯಕ್ತಿಯನ್ನು/ಇತರರಲ್ಲಿರುವ ಅರೆಕೊರೆಗಳನ್ನು ಎತ್ತಿ ನಿಂದಿಸುವ ಕೆಟ್ಟವ್ಯಕ್ತಿಯನ್ನು;

ಏನ್=ಯಾವ ರೀತಿಯಲ್ಲಿ ; ಎಂಬೆ=ಹೇಳುವೆ; ಏನೆಂಬೆ=ಏನೆಂದು ತಾನೆ ಹೇಳಲಿ/ಇಂತಹ ತಿಳಿಗೇಡಿತನದ ವರ್ತನೆಯನ್ನು ಹೇಳಲು ಪದಗಳೇ ಇಲ್ಲ; ಕೂಡಲ ಸಂಗಮದೇವಾ=ಬಸವಣ್ಣನ ಮೆಚ್ಚಿನ ದೇವರು;

ತನ್ನ ಭಿನ್ನವನರಿಯದೆ ಅನ್ಯರನೆಂಬ ಕುನ್ನಿಯನೇನೆಂಬೆ ಕೂಡಲ ಸಂಗಮದೇವಾ=ಹಾವಾಡಿಗನು ತನ್ನಂತೆ ಮತ್ತು ತನ್ನ ಹೆಂಡತಿಯಂತೆಯೇ ಇರುವ ಮತ್ತೊಂದು ಜೋಡಿಯನ್ನು ಕಂಡು ಅಪಶಕುನವಾಯಿತೆಂಬ ಆತಂಕಕ್ಕೆ ಒಳಪಟ್ಟಿದ್ದಾನೆ. ಇದು ಆತನ ತಿಳಿಗೇಡಿತನವನ್ನು ಸೂಚಿಸುವುದು ಮಾತ್ರವಲ್ಲ, ಒಂದು ಸಮಾಜದ ನಡಾವಳಿಯು ಇಲ್ಲವೇ ಜನಸಮುದಾಯದ ನಂಬಿಕೆಯು ಹೇಗೆ ಕೋಟಿಗಟ್ಟಲೆ ಜನಮನದಲ್ಲಿ ಕೀಳರಿಮೆಯನ್ನು ನಾಟುವಂತೆ ಮಾಡಿ, ವ್ಯಕ್ತಿಗಳ ಬದುಕನ್ನು ಹಲವಾರು ಬಗೆಯ ಯಾತನೆಗೆ ಗುರಿಮಾಡುತ್ತದೆ ಎಂಬುದನ್ನು ತಿಳಿಸುತ್ತದೆ. ಈ ಪ್ರಸಂಗದಲ್ಲಿ ಹಾವಾಡಿಗನ ನಂಬಿಕೆಯಿಂದಾಗಿ ನಡೆಯಬೇಕಾಗಿದ್ದ ಮಗನ ಮದುವೆಯ ಮುರಿದುಬಿದ್ದಿತು.

ಶಿವಶರಣಶರಣೆಯರು ಎಲ್ಲಾ ಬಗೆಯ ಶಕುನಗಳನ್ನು ತಿರಸ್ಕರಿಸಿದ್ದರು ಮತ್ತು ಜೀವನದ ಆಗುಹೋಗುಗಳಿಗೆ/ಒಳಿತು ಕೆಡುಕುಗಳಿಗೆ ವ್ಯಕ್ತಿಗಳ ನಡೆನುಡಿಗಳೇ ಕಾರಣ ಎಂಬ ನಿಲುವನ್ನು ಹೊಂದಿದ್ದರು ಎಂಬುದನ್ನು ಈ ವಚನ ತಿಳಿಸುತ್ತದೆ.)



೨೬)　ಹೊರಗೆ ಹೂಸಿ ಏವೆನಯ್ಯಾ
ಒಳಗೆ ಶುದ್ಧವಿಲ್ಲದನ್ನಕ್ಕ

ಮಣಿಯ ಕಟ್ಟಿ ಏವೆನಯ್ಯಾ
ಮನಮುಟ್ಟದನ್ನಕ್ಕ

ನೂರನೋದಿ ಏವೆನಯ್ಯಾ
ನಮ್ಮ ಕೂಡಲಸಂಗಮದೇವರ
ಮನ ಮುಟ್ಟದನ್ನಕ್ಕ.

**ಒಳ್ಳೆಯ ನಡೆನುಡಿಗಳಿಂದ ಬಾಳಬೇಕೆಂಬ ಅರಿವನ್ನು ಮತ್ತು ಎಚ್ಚರವನ್ನು ಮನದಲ್ಲಿ ಹೊಂದಿರದ ವ್ಯಕ್ತಿಯು ಮಾಡುವ ದೇವರ ಪೂಜೆಯಿಂದ ಇಲ್ಲವೇ ಕಲಿಯುವ ಅಕ್ಕರದ ವಿದ್ಯೆಯಿಂದ ಯಾವುದೇ ಪ್ರಯೋಜನವಿಲ್ಲವೆಂಬ ಸಂಗತಿಯನ್ನು ಈ ವಚನದಲ್ಲಿ ಹೇಳಲಾಗಿದೆ.**

**ಅರಿವು ಎಂದರೆ "ಜೀವನದಲ್ಲಿ ಯಾವುದು ಒಳ್ಳೆಯದು/ಯಾವುದು ಕೆಟ್ಟದ್ದು; ಯಾವುದು ಸರಿ/ಯಾವುದು ತಪ್ಪು; ಯಾವುದು ದಿಟ/ಯಾವುದು ಸಟೆ ; ಯಾವುದು ನಿಸರ್ಗ ಸಹಜವಾದುದು/ಯಾವುದು ಮಾನವನಿಂದ ರಚನೆಗೊಂಡಿದೆ" ಎಂಬ ತಿಳುವಳಿಕೆ.**

**ಎಚ್ಚರ ಎಂದರೆ "ಒಳಿತು ಕೆಡುಕಿನ ಒಳಮಿಡಿತಗಳಿಂದ ಕೂಡಿರುವ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ತನಗೆ, ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟು ಮಾಡುವ ನಡೆನುಡಿಗಳನ್ನು ಹೊಂದಿರುವುದು".**

(ಹೊರಗೆ=ಬಹಿರಂಗವಾಗಿ/ಹೊರಗಡೆಯಲ್ಲಿ/ಎಲ್ಲರಿಗೂ ಕಾಣುವಂತೆ; ಪೂಸು>ಹೂಸು=ಬಳಿದುಕೊಳ್ಳುವುದು/ಲೇಪಿಸಿಕೊಳ್ಳುವುದು/ತೊಡೆದುಕೊಳ್ಳುವುದು; ಹೂಸಿ='ವಿಭೂತಿ'ಯನ್ನು/'ಗಂಧ'ದ ಕೊರಡನ್ನು ನೀರಿನಿಂದ ತೇಯ್ದಾಗ ಬರುವ ಹಸಿಯನ್ನು ಹಣೆ/ತೋಳು/ಹೊಟ್ಟೆಯ ಮೇಲೆ ಬಳಿದುಕೊಳ್ಳುವುದು; ಏವು=ಏನು ಮಾಡುವುದು; ಏವೆನ್=ಏನು ಮಾಡಿದಂತಾಯಿತು/ಪ್ರಯೋಜನವೇನು;

ಅಯ್ಯಾ=ಇತರರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ಒಳಗೆ=ಅಂತರಂಗದಲ್ಲಿ/ಒಳಗಡೆ/ಮನದಲ್ಲಿ; �శుద్ధ+ಇಲ್ಲದ+ಅನ್ನಕ್ಕ; ಶುದ್ಧ=ಚೊಕ್ಕಟವಾದ/ಶುಚಿಯಾದ/ಕೊಳಕು ಇಲ್ಲದಿರುವ; ಅನ್ನಕ್ಕ=ತನಕ/ವರೆಗೆ; ಶುದ್ಧವಿಲ್ಲದನ್ನಕ್ಕ=ಶುದ್ಧವಿಲ್ಲದಿರುವ ತನಕ/ವರೆಗೆ;

ಹೊರಗೆ ಹೂಸಿ ಏವೆನಯ್ಯಾ ಒಳಗೆ ಶುದ್ಧವಿಲ್ಲದನ್ನಕ್ಕ=ಅಂತರಂಗದ ಮನದಲ್ಲಿ ಒಳ್ಳೆಯ ಆಲೋಚನೆಯು ಇಲ್ಲದಿರುವಾಗ, ಬಹಿರಂಗದಲ್ಲಿ ಮಯ್ ಮೇಲೆ 'ವಿಭೂತಿ'/'ಗಂಧ'ವನ್ನು ಬಳಿದುಕೊಂಡು ನೋಡುವವರ ಕಣ್ಣಿನಲ್ಲಿ ದೇವರಲ್ಲಿ ಒಲವು ಉಳ್ಳವನಂತೆ ಕಾಣಿಸಿಕೊಳ್ಳುವುದರಿಂದ ಏನು ತಾನೆ ಪ್ರಯೋಜನ;

ಮಣಿ=ದಾರ/ನೂಲುನಿಂದ ಪೋಣಿಸಲು ಅನುಕೂಲವಾಗುವಂತೆ ನಡುವೆ ತೂತನ್ನು ಹೊಂದಿರುವ ದುಂಡನೆಯ ಹವಳ/ಮುತ್ತು; ಕಟ್ಟು=ಒಡವೆ ವಸ್ತುಗಳನ್ನು ತೊಟ್ಟುಕೊಳ್ಳುವದು/ಮಯ್ ಮೇಲೆ ಹಾಕಿಕೊಳ್ಳುವುದು; ಮನ+ಮುಟ್ಟದ+ಅನ್ನಕ್ಕ; ಮನ=ಮನಸ್ಸು/ಚಿತ್ತ; ಮುಟ್ಟು=ಸೇರು/ತಾಕು/ಪಡೆ/ಹೊಂದು/ತಲುಪು; ಮನಮುಟ್ಟು=ಮನಸ್ಸಿಗೆ ಚೆನ್ನಾಗಿ/ಸರಿಯಾಗಿ ತಿಳಿಯುವುದು; ಮುಟ್ಟದ=ಸೇರದ/ಹೊಂದದ/ಪಡೆಯದ; ಮನಮುಟ್ಟದನ್ನಕ್ಕ=ಮನದಲ್ಲಿ ಒಳ್ಳೆಯ ಒಳಮಿಡಿತ/ಚಿಂತನೆ/ಆಲೋಚನೆಯು ಇಲ್ಲದಿರುವ ತನಕ/ವರೆಗೆ;

ಮಣಿಯ ಕಟ್ಟಿ ಏವೆನಯ್ಯಾ ಮನಮುಟ್ಟದನ್ನಕ್ಕ=ಮನಸ್ಸಿನಲ್ಲಿ ಒಳ್ಳೆಯ ಒಳಮಿಡಿತಗಳನ್ನು ಹೊಂದಿಲ್ಲದಿರುವಾಗ ಮಣಿಗಳಿಂದ ಮಾಡಿರುವ ಮಾಲೆಯನ್ನು ಕೊರಳಲ್ಲಿ/ತೋಳುಗಳಲ್ಲಿ ಹಾಕಿಕೊಳ್ಳುವುದರಿಂದ ಏನನ್ನು ತಾನೆ ಪಡೆದಂತಾಯಿತು/ಮಾಡಿದಂತಾಯಿತು;

ನೂರನ್+ಓದಿ; ನೂರು=ಹತ್ತರಿಂದ ಹತ್ತನ್ನು ಗುಣಿಸಿದಾಗ ಬರುವ ಸಂಕೆ/ಅನೇಕ/ಬಹಳ; ಓದು=ಲಿಪಿರೂಪದಲ್ಲಿ ರಚನೆಗೊಂಡಿರುವ ಹೊತ್ತಿಗೆಯಲ್ಲಿನ ವಿಚಾರಗಳನ್ನು ತಿಳಿಯುವುದು/ಕಲಿಯುವುದು/ಉಚ್ಚರಿಸುವುದು; ಕೂಡಲ ಸಂಗಮದೇವ=ಬಸವಣ್ಣನ ಮೆಚ್ಚಿನ ದೇವರು/ಬಸವಣ್ಣನ ವಚನಗಳ ಅಂಕಿತನಾಮ;

ನೂರನೋದಿ ಏವೆನಯ್ಯಾ ನಮ್ಮ ಕೂಡಲಸಂಗಮದೇವರ ಮನಮುಟ್ಟದನ್ನಕ್ಕ=ಹಲವಾರು ಹೊತ್ತಿಗೆಗಳ ಓದಿನಿಂದ "ಎಲ್ಲಾ ಬಗೆಯ ದೇವರ ಪೂಜೆ/ಆಚರಣೆಗಳಿಗಿಂತಲೂ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವ ನಡೆನುಡಿಯೇ ದೊಡ್ಡದು" ಎಂಬುದು ವ್ಯಕ್ತಿಯ ಮನಸ್ಸಿಗೆ ಅರಿವಾಗದಿದ್ದರೆ, ಅಂತಹ ಓದಿನಿಂದ ಬಂದ ಪ್ರಯೋಜನವಾದರೂ ಏನು;

ವ್ಯಕ್ತಿಯ ಮನಸ್ಸನ್ನು ಅರಿವು ಮತ್ತು ಎಚ್ಚರದ ಸಂಕೇತವೆಂದು ಹೇಳುವ ಕತೆಯೊಂದು 'ಬೌದ್ಧಧರ್ಮ'ದ ತ್ರಿಪಿಟಕದ ಕತೆಯೊಂದರಲ್ಲಿ ನಿರೂಪಣೆಗೊಂಡಿದೆ.

ಒಬ್ಬ ಗುರು ತನ್ನ ಬಳಿ ವಿದ್ಯೆಯನ್ನು ಕಲಿಯುತ್ತಿದ್ದ ಹತ್ತು ಮಂದಿ ಗುಡ್ಡರಿಗೆ/ 'ಶಿಷ್ಯ'ರಿಗೆ ತಲಾ ಒಂದೊಂದು ಮಾವಿನ ಹಣ್ಣನ್ನು ನೀಡಿ "ಯಾರೂ ಕಾಣದ ಎಡೆಯಲ್ಲಿ ತಿಂದು ಬನ್ನಿ" ಎಂದು ಹೇಳಿ ಕಳುಹಿಸುತ್ತಾನೆ. ಕೆಲ ಸಮಯದ ನಂತರ ಹಿಂತಿರುಗಿ ಬಂದ ಗುಡ್ಡರನ್ನು ಕೇಳಿದಾಗ, ಒಬ್ಬನನ್ನು ಹೊರತುಪಡಿಸಿ, ಉಳಿದವರೆಲ್ಲರೂ ತಾವು ಹಣ್ಣನ್ನು ಯಾರೂ ಇಲ್ಲದ ಎಡೆಯಲ್ಲಿ ತಿಂದು ಬಂದ ಬಗೆಯನ್ನು ವಿವರಿಸುತ್ತಾರೆ. ಹಣ್ಣನ್ನು ಕಯ್ಯಲ್ಲಿಯೇ ಹಿಡಿದು ತಂದಿದ್ದ ಗುಡ್ಡನನ್ನು ಕುರಿತು ಗುರು "ಏಕೆ ನಿನಗೆ ಯಾರೂ ಇಲ್ಲದ ಎಡೆಯೇ ಸಿಗಲಿಲ್ಲವೇ?" ಎಂದಾಗ ಗುಡ್ಡನು "ನಾನು ಹೋದ ಎಡೆಯಲ್ಲಿ ಬೇರೆ ವ್ಯಕ್ತಿಗಳಿಲ್ಲದಿದ್ದರೂ ನನ್ನ ಮನಸ್ಸು ನಾನು ಮಾಡುವುದೆಲ್ಲವನ್ನೂ ಯಾವಾಗಲೂ ನೋಡುತ್ತಿತ್ತು. ಆದ್ದರಿಂದ ನನ್ನ ಮನಸ್ಸಿಗೆ ಮರೆಮಾಚಿ ಹಣ್ಣನ್ನು ತಿನ್ನಲಾಗಲಿಲ್ಲ" ಎನ್ನುತ್ತಾನೆ.

ವ್ಯಕ್ತಿಯು ಮಾಡುವ ಒಳಿತು ಕೆಡುಕಿನ ಕೆಲಸಗಳೆಲ್ಲವನ್ನು ಮನಸ್ಸು ನೋಡುತ್ತಿರುತ್ತದೆ ಎಂಬ ಸಂಗತಿಯನ್ನು ಈ ಕತೆಯು ಹೇಳುತ್ತದೆ.



## ಬಸವಣ್ಣನವರ ವಚನಗಳಿಂದ ಆಯ್ದ ಸಾಲುಗಳ ಓದು

ಸಾಲುಗಳ ಕೊನೆಯಲ್ಲಿ ಕೊಟ್ಟಿರುವ ಅಂಕಿಗಳು ಬಸವಣ್ಣನವರ
ವಚನ ಸಂಪುಟದ ವಚನದ ಅಂಕಿ ಮತ್ತು ಪುಟದ ಅಂಕಿಯನ್ನು ತಿಳಿಸುತ್ತವೆ.

ಬಸವ ಯುಗದ ವಚನ ಮಹಾಸಂಪುಟ : ಒಂದು

**ಸಂ: ಎಂ.ಎಂ.ಕಲಬುರ್ಗಿ**

ಬಸವಣ್ಣನವರ ವಚನ ಸಂಪುಟ

**೧)  ಅಡಿಗಡಿಗೆ ದೇವರಾಣೆ**
**ಅಡಿಗಡಿಗೆ ಭಕ್ತರಾಣೆ**
**ಅಡಿಗಡಿಗೆ ಗುರುವಿನಾಣೆ**
**ಎಂಬ ವಚನವೇ ಹೊಲ್ಲ. (೬೬೦-೬೧)**

ಅಡಿಗಡಿಗೆ=ಮತ್ತೆ ಮತ್ತೆ/ಪದೇ ಪದೇ/ಮೇಲಿಂದ ಮೇಲೆ; ದೇವರ್+ಆಣೆ; ದೇವರು =ಜೀವನದಲ್ಲಿ ಬರುವ ಎಡರು ತೊಡರುಗಳನ್ನು ನಿವಾರಿಸಿ, ತಮಗೆ ಒಳಿತನ್ನು ಮಾಡಿ ಕಾಪಾಡುವ ಅಗೋಚರ ವ್ಯಕ್ತಿಯನ್ನು/ಶಕ್ತಿಯನ್ನು ದೇವರು ಎಂದು ಮಾನವ ಸಮುದಾಯ ನಂಬಿದೆ; ಆಣೆ=ವ್ಯಕ್ತಿಯು ತಾನು ಆಡುತ್ತಿರುವ ಮಾತು ನಿಜವೆಂದು ಇತರರನ್ನು ನಂಬಿಸಲು ತನ್ನ ಮೆಚ್ಚಿನ ದೇವರು/ವ್ಯಕ್ತಿ/ವಸ್ತು/ತನ್ನ ಕಣ್ಣುಗಳನ್ನು ಹೆಸರಿಸಿ ಹೇಳುವ ನುಡಿ;

ದೇವರಾಣೆ=ದೇವರ ಹೆಸರನ್ನು ಉಚ್ಚರಿಸುತ್ತ ಇಕ್ಕುವ ಆಣೆ; ಭಕ್ತರ್+ಆಣೆ; ಭಕ್ತ=ಒಳ್ಳೆಯ ನಡೆನುಡಿಗಳಿಂದ ದೇವರನ್ನು ಒಲಿದವನು/ಒಳ್ಳೆಯ ನಡೆನುಡಿಗಳೇ ದೇವರೆಂದು ನಂಬಿದವನು; ಭಕ್ತರಾಣೆ=ದೇವರಲ್ಲಿ ಒಲವುಳ್ಳ ವ್ಯಕ್ತಿಗಳ ಹೆಸರಿನ ಮೇಲೆ ಇಕ್ಕುವ ಆಣೆ; ಗುರು+ಇನ್+ಆಣೆ; ಗುರು=ವ್ಯಕ್ತಿಗೆ/ಗುಡ್ಡನಿಗೆ ತಿಳುವಳಿಕೆಯನ್ನು ನೀಡಿ, ಅವನ ವ್ಯಕ್ತಿತ್ವವನ್ನು ಒಳ್ಳೆಯ ರೀತಿಯಲ್ಲಿ ರೂಪಿಸುವ ವ್ಯಕ್ತಿ;

ಗುರುವಿನಾಣೆ=ಗುರುವಿನ ಹೆಸರಿನ ಮೇಲೆ ಇಡುವ ಆಣೆ; ಎಂಬ=ಎನ್ನುವ/ ಹೇಳುವ; ವಚನ=ಮಾತು/ನುಡಿ; ಹೊಲ್ಲ=ಕೆಟ್ಟುದ್ದು/ಹೀನವಾದುದು/ಒಳ್ಳೆಯದಲ್ಲ;

ವಚನವೆ ಹೊಲ್ಲ=ಆಣೆಯಿಂದ ಕೂಡಿದ ಮಾತು ಒಳ್ಳೆಯದಲ್ಲ. ಆಣೆಯಿಡುತ್ತ ಆಡುವ ಮಾತುಗಳನ್ನು ಎಂದಿಗೂ ನಂಬಬಾರದು. ಏಕೆಂದರೆ ಆಣೆಯಿಂದ ಕೂಡಿದ ಮಾತಿನ ಹಿನ್ನೆಲೆಯಲ್ಲಿ ನಿಜದ ಸಂಗತಿಗಳನ್ನು ಮುಚ್ಚಿಡುವ ಮತ್ತು ಇತರರನ್ನು ವಂಚಿಸುವ ಹುನ್ನಾರ ಹೆಚ್ಚಾಗಿ ಕಂಡುಬರುತ್ತದೆ.

ವ್ಯಕ್ತಿಯು ಇತರರೊಡನೆ ಮಾತನಾಡುವಾಗ ನಿಜದ ಸಂಗತಿಯನ್ನು ಹೇಳಿದರೆ, ಅದಕ್ಕೆ ಯಾವುದೇ ಬಗೆಯ ಆಣೆಯನ್ನು ಇಡಬೇಕಾದ ಅಗತ್ಯ ಉಂಟಾಗುವುದಿಲ್ಲ.

ಯಾವ ವ್ಯಕ್ತಿಯು ತಾನಾಡುವ ಮಾತುಗಳಿಗೆ ಪೂರಕವಾಗಿ ಮತ್ತೆ ಮತ್ತೆ ಆಣೆಯನ್ನು ಇಡುವುದರ ಮೂಲಕವೇ ಜನರ ನಂಬಿಕೆಗೆ ಪಾತ್ರನಾಗಲು ಪ್ರಯತ್ನಿಸುತ್ತಾನೆಯೋ, ಅಂತಹ ವ್ಯಕ್ತಿಯು ತನ್ನ ನಡೆನುಡಿಯಲ್ಲಿ ತನಗೆ ನಂಬಿಕೆಯಿಲ್ಲದ/ತನ್ನ ವ್ಯಕ್ತಿತ್ವವನ್ನು ತಾನೇ ಕುಗ್ಗಿಸಿಕೊಂಡ/ಇತರರನ್ನು ನಂಬಿಸಿ ಮೋಸಮಾಡುವ ನಯವಂಚಕನಾಗಿರುತ್ತಾನೆ.

ಆದರೆ ಬಡತನ ಮತ್ತು ಜಾತಿ ಮೆಟ್ಟಿಲಿನಲ್ಲಿ ಕೆಳಹಂತದಲ್ಲಿರುವ ವ್ಯಕ್ತಿಯು ಉಳ್ಳವರ ಮುಂದೆ ತನ್ನ ಪ್ರಾಮಾಣಿಕತನದ ನಡೆನುಡಿಗಳನ್ನು ಸಾಬೀತು ಪಡಿಸಲು ಬೇರೆ ದಾರಿಯಿಲ್ಲದೆ ಆಣೆಯಿಡುವುದು ಕೆಲವೊಮ್ಮೆ ಕಂಡುಬರುತ್ತದೆ.



೨)  ಅಯ್ಯಾ ಎಂದಡೆ ಸ್ವರ್ಗ
ಎಲವೊ ಎಂದಡೆ ನರಕ. (೨೪೦-೨೪)

ಅಯ್ಯಾ=ಮತ್ತೊಬ್ಬ ವ್ಯಕ್ತಿಯನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ಎಂದಡೆ=ಎಂದರೆ/ನುಡಿದರೆ/ಹೇಳಿದರೆ; ಎಲವೊ=ಮತ್ತೊಬ್ಬ ವ್ಯಕ್ತಿಯನ್ನು ತನಗಿಂತ ಕೀಳೆಂದು ಪರಿಗಣಿಸಿ, ತಿರಸ್ಕಾರದಿಂದ ಕಾಣುತ್ತ ಅಹಂಕಾರದಿಂದ ಮೆರೆಯುತ್ತ ಮಾತನಾಡುವಾಗ ಬಳಸುವ ಪದ;

ಸ್ವರ್ಗ ಮತ್ತು ನರಕ=ಮಾನವನ ಕಲ್ಪನೆಯಲ್ಲಿ ರೂಪುಗೊಂಡಿರುವ ಎರಡು ನೆಲೆಗಳು. ಸ್ವರ್ಗವು ಚೆಲುವು ಒಲವು ನಲಿವನ್ನುಂಟುಮಾಡುವ ತಾಣ/ನೆಲೆ/ಜಾಗ ಮತ್ತು ನರಕವು ಸಂಕಟ ವೇದನೆ ನೋವನ್ನುಂಟುಮಾಡುವ ತಾಣ ಎಂಬ ಕಲ್ಪನೆಯು ಜನಮನದಲ್ಲಿದೆ.

"ಅಯ್ಯಾ ಎಂದಡೆ ಸ್ವರ್ಗ" ಎಂಬ ನುಡಿಗಳು ವ್ಯಕ್ತಿಯು ಕುಟುಂಬದ ನೆಲೆ/ದುಡಿಮೆಯ ನೆಲೆ/ಸಾರ್ವಜನಿಕ ನೆಲೆಯಲ್ಲಿ ಇತರ ವ್ಯಕ್ತಿಗಳೊಡನೆ ವ್ಯವಹರಿಸುವಾಗ, ಅವರನ್ನು ಪ್ರೀತಿ/ಕರುಣೆ/ನಲಿವಿನಿಂದ "ಅಯ್ಯಾ" ಎಂದು ಮಾತನಾಡಿಸಿದರೆ, ಆಗ ಅವರು ಕೂಡ ಅದೇ ಬಗೆಯಲ್ಲಿ ಪ್ರೀತಿಯಿಂದ ಮಾತನಾಡತೊಡಗುತ್ತಾರೆ. ಒಬ್ಬರು ಮತ್ತೊಬ್ಬರ ಬಗ್ಗೆ ಹೊಂದಿರುವ ಒಳಿತಿನ ಒಳಮಿಡಿತಗಳಿಂದಾಗಿ ಇಂತಹ ಸನ್ನಿವೇಶದಲ್ಲಿ ನಡೆಯುವ ಮಾತುಕತೆಯು ವ್ಯಕ್ತಿಗಳ ಪಾಲಿಗೆ ಆನಂದ/ನೆಮ್ಮದಿ/ಒಳಿತನ್ನು ನೀಡುತ್ತದೆ; ಒಳ್ಳೆಯ ಮಾತಿನಿಂದ ಉಂಟಾಗುವ ಒಳ್ಳೆಯ ಪರಿಣಾಮಕ್ಕೆ ಒಂದು ರೂಪಕವಾಗಿ ಸ್ವರ್ಗವನ್ನು ಹೆಸರಿಸಲಾಗಿದೆ.

"ಎಲವೊ ಎಂದಡೆ ನರಕ" ಎಂಬ ನುಡಿಗಳು ವ್ಯಕ್ತಿಯು ಮತ್ತೊಬ್ಬ ವ್ಯಕ್ತಿಯೊಡನೆ ವ್ಯವಹರಿಸುವಾಗ, ಜಾತಿ/ಮತ/ಗದ್ದುಗೆ/ಸಂಪತ್ತಿನ ಅಹಂಕಾರದಿಂದ ಅವನ ವ್ಯಕ್ತಿತ್ವವನ್ನೇ ಕಡೆಗಣಿಸಿ/ಅವನನ್ನು ತನಗಿಂತಲೂ ಕೀಳೆಂದು ಪರಿಗಣಿಸಿ, 'ಎಲವೊ' ಎಂದು ಮಾತನಾಡಿಸಿದರೆ, ಅಂತಹ ಮಾತನ್ನು ಕೇಳಿದ ವ್ಯಕ್ತಿಯು ಮನದಲ್ಲಿ ನೊಂದುಕೊಳ್ಳುತ್ತಾನೆ. ಕೆಲವೊಮ್ಮೆ ಆ ವ್ಯಕ್ತಿಯು ಕೋಪಗೊಂಡು ಇಲ್ಲವೇ ಅಪಮಾನವನ್ನು ತಡೆಯಲಾರದೆ,

ತನ್ನನ್ನು ಕಡೆಗಣಿಸಿ ಮಾತನಾಡಿದವನಿಗೆ ಹಿಂತಿರುಗಿಕೊಂಡು ನಿಂದಿಸಿ ಮಾತನಾಡ ತೊಡಗಿದರೆ, ಆಗ ಅವರಿಬ್ಬರ ನಡುವೆ ಮಾತಿಗೆ ಮಾತು ಬೆಳೆದು ಬಯ್ಗುಳಕ್ಕೆ/ಹೊಡೆದಾಟಕ್ಕೆ ತಿರುಗಿ, ಆ ಸನ್ನಿವೇಶವು ವ್ಯಕ್ತಿಗಳ ಪಾಲಿಗೆ ಸಾವು/ನೋವು/ಮಾನಸಿಕ ಒತ್ತಡ/ಅಪಮಾನವನ್ನು ಉಂಟುಮಾಡುತ್ತದೆ. ಕೆಟ್ಟ ಮಾತಿನಿಂದ ಉಂಟಾಗುವ ಪರಿಣಾಮವನ್ನು ಸೂಚಿಸಲು ನರಕವನ್ನು ಒಂದು ರೂಪಕವಾಗಿ ಬಳಸಲಾಗಿದೆ.

ವ್ಯಕ್ತಿಯು ಮಾತನಾಡುವಾಗ ಇತರರ ಬಗ್ಗೆ ತಳೆಯಬೇಕಾದ ನಿಲುವನ್ನು ಮತ್ತು ಬಳಸುವ ಪದಗಳ ಬಗ್ಗೆ ಹೊಂದಿರಬೇಕಾದ ಎಚ್ಚರವನ್ನು ಈ ನುಡಿಗಳು ಸೂಚಿಸುತ್ತವೆ.



೩) ಅರತವಡಗದು ಕ್ರೋಧ ತೊಲಗದು
ಕ್ರೂರ ಕುಭಾಷೆ ಕುಹಕ ಬಿಡದನ್ನಕ್ಕ
ನೀನೆತ್ತಲು ಶಿವನೆತ್ತಲು ಹೋಗತ್ತ ಮರುಳೆ. (೧೩೧-೨೧)

ಅರತ+ಅಡಗದು; ಅರತ=ಸೊಕ್ಕು/ಮದ/ಗರ್ವ; ಅಡಗು=ಕೊನೆಗೊಳ್ಳು/ಮುಗಿ/ಹಿಂದಕ್ಕೆ ಸರಿ;

ಅರತವಡಗದು=ಸೊಕ್ಕಿನ ನಡೆನುಡಿಯು ಬಿಟ್ಟುಹೋಗುವುದಿಲ್ಲ; ಕ್ರೋಧ=ಸಿಟ್ಟು/ಕೋಪ/ಆಕ್ರೋಶ; ತೊಲಗು=ಅಳಿ/ನಾಶವಾಗು/ಇಲ್ಲವಾಗು;

ಕ್ರೋಧ ತೊಲಗದು= ಕೋಪತಾಪದ ನಡೆನುಡಿಯು ಇಲ್ಲವಾಗುವುದಿಲ್ಲ;

ಕ್ರೂರ=ಕರುಣೆಯಿಲ್ಲದ ವರ್ತನೆ/ದಯೆಯಿಲ್ಲದ ನಡತೆ; ಕುಭಾಷೆ=ಕೆಟ್ಟ ನುಡಿ/ಬಯ್ಗುಳ/ಇತರರ ಮನವನ್ನು ಗಾಸಿಗೊಳಿಸುವಂತಹ ಮಾತು; ಕುಹಕ=ಮೋಸ/ವಂಚನೆ/ಕಪಟತನ/ಅಣಕ/ವ್ಯಂಗ್ಯದ ನಡೆನುಡಿ; ಬಿಡದ+ಅನ್ನಕ್ಕ; ಬಿಡು=ತೊರೆ/ತ್ಯಜಿಸು; ಅನ್ನಕ್ಕ=ವರೆಗೆ/ತನಕ; ಬಿಡದನ್ನಕ್ಕ=ಬಿಡುವ ವರೆಗೆ/ಬಿಡುವ ತನಕ; ನೀನ್+ಎತ್ತಲು; ಎತ್ತಲು=ಯಾವ ಕಡೆ/ಯಾವ ದಿಕ್ಕು; ಶಿವನ್+ಎತ್ತಲು; ಶಿವ=ಈಶ್ವರ/ದೇವರು/ಲಿಂಗ; ಹೋಗು+ಅತ್ತ; ಹೋಗು=ತೆರಳು/ಗಮಿಸು; ಅತ್ತ=ಆ ಕಡೆ/ಆ ದಿಕ್ಕು; ಮರುಳ=ತಿಳಿಗೇಡಿ/ದಡ್ಡ/ಹುಚ್ಚ;

ಶಿವಶರಣಶರಣೆಯರ ಪಾಲಿಗೆ "ಶಿವ" ಎಂದರೆ ಮಣ್ಣು/ಮರ/ಕಲ್ಲು/ಲೋಹದಿಂದ ಮಾಡಿದ ವಿಗ್ರಹರೂಪಿ ಲಿಂಗವಲ್ಲ; ವ್ಯಕ್ತಿಯು ಒಳ್ಳೆಯ ನಡೆನುಡಿಗಳಿಂದ ಬಾಳುವುದರ ಮೂಲಕ ಶಿವನನ್ನು ಒಲಿಸಿಕೊಳ್ಳಬೇಕೆಂಬ/ಪೂಜಿಸಬೇಕೆಂಬ ನಿಲುವನ್ನು ಹೊಂದಿದ್ದರು. ಸೊಕ್ಕಿನ ನಡೆನುಡಿ/ಕೋಪ/ಕ್ರೂರತನ/ಕೆಟ್ಟ ನುಡಿ/ಕಪಟತನವನ್ನು ಬಿಡದಿದ್ದರೆ, ಅಂತಹ ವ್ಯಕ್ತಿಯು ಶಿವನನ್ನು ಪೂಜಿಸಲು/ಒಲಿಸಿಕೊಳ್ಳಲು ಯೋಗ್ಯನಲ್ಲವೆಂಬುದನ್ನು ಈ ನುಡಿಗಳು ಸೂಚಿಸುತ್ತಿವೆ.



## ೪) ಆತ್ಮಸ್ತುತಿ ಪರನಿಂದೆಯ ಕೇಳಿಸದಿರಯ್ಯಾ. (೪೦೮–೪೦)

ಆತ್ಮಸ್ತುತಿ=ವ್ಯಕ್ತಿಯು ತನ್ನ ನಡೆನುಡಿಗಳನ್ನು ತಾನೇ ದೊಡ್ಡದಾಗಿ ಇತರರ ಮುಂದೆ ಹೊಗಳಿಕೊಳ್ಳುವುದು/ಗುಣಗಾನ ಮಾಡುವುದು/ಬಣ್ಣಿಸುವುದು; ಸ್ತುತಿ=ಹೊಗಳಿಕೆ/ಕೊಂಡಾಟ/ಗುಣಗಾನ; ಪರ=ಬೇರೆಯ/ಅನ್ಯ/ಇತರ; ನಿಂದೆ=ತೆಗಳಿಕೆ/ಬಯ್ಯುವಿಕೆ/ಕಡೆಗಣಿಸಿ ಮಾತನಾಡುವುದು;

ಪರನಿಂದೆ=ಮತ್ತೊಬ್ಬ ವ್ಯಕ್ತಿಯ/ಇತರರ ನಡೆನುಡಿಯನ್ನು ಕುರಿತು ಅಣಕಿಸುತ್ತ/ಟೀಕಿಸುತ್ತ/ಹಂಗಿಸುತ್ತ/ಕಡೆಗಣಿಸುತ್ತ ಮಾತನಾಡುವುದು/ಬಯ್ಯುವುದು/ತೆಗಳುವುದು; ಕೇಳಿಸದಿರು+ಅಯ್ಯಾ; ಕೇಳು=ಆಲಿಸು/ಕಿವಿಗೊಡು; ಕೇಳಿಸು=ಕೇಳುವಂತೆ ಮಾಡು/ಕಿವಿಗೆ ಬೀಳು/ಕೇಳಿ ಬರುವುದು; ಕೇಳಿಸದಿರು=ಕೇಳದಂತೆ ಮಾಡು/ಕಿವಿಗೆ ಬೀಳದಂತೆ ಮಾಡು;

ಯಾವಾಗಲೂ ತನ್ನನ್ನು ತಾನೇ ಹೊಗಳಿಕೊಳ್ಳುತ್ತಿರುವ ಮತ್ತು ಇತರರನ್ನು ತೆಗಳುತ್ತಿರುವ ವ್ಯಕ್ತಿಗಳೊಡನೆ ಯಾವುದೇ ಬಗೆಯ ನಂಟನ್ನು/ಒಡನಾಟವನ್ನು ಇಟ್ಟುಕೊಳ್ಳಬಾರದು. ಯಾಕೆಂದರೆ ಇಂತಹ ವ್ಯಕ್ತಿಗಳು ಇತರರ ಒಳ್ಳೆಯ ನಡೆನುಡಿಗಳನ್ನು ಕಂಡು ಮೆಚ್ಚುವುದಿಲ್ಲ.



೫)	ಆನೆಯನೇರಿಕೊಂಡು ಹೋದಿರೇ ನೀವು
ಕುದುರೆಯನೇರಿಕೊಂಡು ಹೋದಿರೇ ನೀವು

ಕುಂಕುಮ ಕಸ್ತೂರಿಯ ಹೂಸಿಕೊಂಡು ಹೋದಿರೇ ಅಣ್ಣಾ
ಸತ್ಯದ ನಿಲವನರಿಯದೆ ಹೋದಿರಲ್ಲಾ

ಸದ್ಗುಣವೆಂಬ ಫಲವ ಬಿತ್ತದೆ
ಬೆಳೆಯದೆ ಹೋದಿರಲ್ಲಾ. (೬೩೮-೫೯)

ಆನೆ+ಅನ್+ಏರಿಕೊಂಡು; ಆನೆ=ಗಜ/ಕರಿ; ಅನ್=ಅನ್ನು; ಏರು=ಹತ್ತು/ಮೇಲೆ ಹೋಗುವುದು; ಹೋಗು=ತೆರಳು/ಗಮಿಸು; ಹೋದಿರೇ=ಹೋದಿರಲ್ಲವೇ;

ಕುದುರೆ+ಅನ್+ಏರಿಕೊಂಡು; ಕುದುರೆ=ಅಶ್ವ/ತುರಗ/ಹಯ;

ಕುಂಕುಮ=ಒಂದು ಬಗೆಯ ಮಂಗಳ ದ್ರವ್ಯ/ಹಣೆಗೆ ಹಚ್ಚಿಕೊಳ್ಳುವ ವಸ್ತು; ಕಸ್ತೂರಿ=ಕಸ್ತೂರಿ ಎಂಬ ಹೆಸರಿನ ಪ್ರಾಣಿಯ ಹೊಕ್ಕುಳಿನಲ್ಲಿ ದೊರೆಯುವ ಸುವಾಸನೆಯುಳ್ಳ ವಸ್ತು; ಹೂಸು=ಬಳಿದುಕೊಳ್ಳುವುದು/ಲೇಪಿಸಿಕೊಳ್ಳುವುದು;

ಆನೆಯನೇರಿಕೊಂಡು/ಕುದುರೆಯನೇರಿಕೊಂಡು/ಕುಂಕುಮ ಕಸ್ತೂರಿಯ ಹೂಸಿಕೊಂಡು=ಈ ನುಡಿಗಳು ರೂಪಕಗಳಾಗಿ ಬಳಕೆಗೊಂಡಿವೆ. ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಸಾಗುವ ಇಲ್ಲವೇ ಕುದುರೆಯ ಮೇಲೆ ಕುಳಿತು ಸವಾರಿ ಮಾಡುವವರು ಅಂದರೆ ರಾಜಮಹಾರಾಜರು/ಸಾಮಂತರು/ಪಾಳೆಯಗಾರರು/ ಮಾಂಡಲಿಕರು/ಸಮಾಜದಲ್ಲಿ ಉನ್ನತವಾದ ಗದ್ದುಗೆಯಲ್ಲಿರುವ ವ್ಯಕ್ತಿಗಳು;

ಕುಂಕುಮ ಕಸ್ತೂರಿಯನ್ನು ಲೇಪಿಸಿಕೊಂಡಿರುವ ವ್ಯಕ್ತಿಗಳು ಅಂದರೆ ಜನಸಮುದಾಯಕ್ಕೆ ಸತ್ಯ/ನೀತಿ/ನ್ಯಾಯದ ನಡೆನುಡಿಗಳನ್ನು ತಿಳಿಯ ಹೇಳುವುದನ್ನೇ ತಮ್ಮ ಕಸುಬನ್ನಾಗಿ ಮಾಡಿಕೊಂಡಿರುವ ಗುರುಹಿರಿಯರು/ದೇವ ಮಾನವರು/ಜಾತಿ ಜಗದ್ಗುರುಗಳು;

ಅಣ್ಣ=ಒಡಹುಟ್ಟಿದವರಲ್ಲಿ ಹಿರಿಯನಾದವನು/ಗಂಡಸರನ್ನು ಒಲವು ನಲಿವಿನಿಂದ ಮಾತನಾಡಿಸುವಾಗ ಬಳಸುವ ಪದ; ಸತ್ಯ=ದಿಟ/ವಾಸ್ತವ/ನಿಜ; ನಿಲವು+ಅನ್+ ಅರಿಯದೆ; ನಿಲವು=ಇರುವಿಕೆ/ರೀತಿ/ಬಗೆ; ಅರಿ=ತಿಳಿ/ಗ್ರಹಿಸು; ಹೋದಿರಿ+ಅಲ್ಲಾ; ಅಲ್ಲಾ=ಅಲ್ಲವೇ ; ಅರಿಯದೆ ಹೋಗು=ತಿಳಿದುಕೊಳ್ಳಲಿಲ್ಲ/ಮನವರಿಕೆ ಮಾಡಿಕೊಳ್ಳಲಿಲ್ಲ;

ಸತ್ಯದ ನಿಲವನರಿಯದೆ ಹೋದಿರಲ್ಲಾ=ಮಾನವ ಸಮುದಾಯದ ಬದುಕಿನಲ್ಲಿ ಯಾವುದು ದಿಟ-ಯಾವುದು ಸಟೆ/ಯಾವುದು ವಾಸ್ತವ-ಯಾವುದು ಕಲ್ಪಿತ / ಯಾವುದು ಸರಿ-ಯಾವುದು ತಪ್ಪು ಎಂಬುದನ್ನು ಮನಗಾಣಲಿಲ್ಲ;

ಸದ್ಗುಣ+ಎಂಬ; ಸದ್ಗುಣ=ಒಳ್ಳೆಯ ನಡೆನುಡಿ/ ಉತ್ತಮ ಗುಣ; ಎಂಬ=ಎನ್ನುವ; ಫಲ=ಬೆಳೆ; ಬಿತ್ತು=ಬೀಜಹಾಕು/ಹರಡು; ಬೆಳೆ=ಉತ್ಪತ್ತಿ ಮಾಡು;

ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲಾ=ಒಳ್ಳೆಯ ನಡೆನುಡಿಗಳಿಂದ ಬಾಳುವುದು ಎಲ್ಲಕ್ಕಿಂತ ದೊಡ್ಡದು ಎಂಬ ಅರಿವನ್ನು ಹಾಗೂ ಸಹಮಾನವರ ಮತ್ತು ಸಮಾಜದ ಒಳಿತಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯು ತನ್ನ ಒಳಿತನ್ನು ಕಾಣಬೇಕೆಂಬ ಎಚ್ಚರವನ್ನು ಜನಮನದಲ್ಲಿ ಮೂಡಿಸಲಿಲ್ಲ;

ಸಮಾಜದಲ್ಲಿ ಎತ್ತರದ ಗದ್ದುಗೆಯಲ್ಲಿ ಕುಳಿತು ಆಡಳಿತವನ್ನು ನಡೆಸುವವರು ಮತ್ತು ಜನರಿಗೆ ತಿಳಿಯ ಹೇಳುವ ಗುರುಹಿರಿಯರು ಮೊದಲು ತಾವು ಒಳ್ಳೆಯ ನಡೆನುಡಿಗಳಿಂದ ಬಾಳುತ್ತ, ಜನಮನದಲ್ಲಿ ಒಳ್ಳೆಯತನದ ಅರಿವು ಮತ್ತು ಎಚ್ಚರವನ್ನು ಮೂಡಿಸದಿದ್ದರೆ, ಅಂತಹ ಆಡಳಿತದಿಂದ ಮತ್ತು ಹಿರಿತನದಿಂದ ಏನೊಂದು ಪ್ರಯೋಜನವಿಲ್ಲವೆಂಬ ಸಂಗತಿಯನ್ನು ಈ ನುಡಿಗಳು ಸೂಚಿಸುತ್ತಿವೆ.



೬) ಇದಿರ ಗುಣವ ಬಲ್ಲೆವೆಂಬರು
ತಮ್ಮ ಗುಣವನರಿಯರು. (೧೨೩-೨೦)

ಇದಿರ=ಇತರರ/ಬೇರೆಯವರ/ಅನ್ಯರ/ಎದುರಿಗೆ ಇರುವವರ; ಗುಣ=ನಡತೆ/ನಡೆನುಡಿ; ಬಲ್ಲೆವು+ಎಂಬರು; ಬಲ್=ತಿಳಿ/ಅರಿ; ಬಲ್ಲೆವು=ತಿಳಿದಿದ್ದೇವೆ/ಅರಿತಿದ್ದೇವೆ; ಎಂಬರು=ಎನ್ನುವರು/ಎಂದು ಹೇಳುವರು;

ಇದಿರ ಗುಣವ ಬಲ್ಲೆವೆಂಬರು=ಬೇರೆಯವರ ವ್ಯಕ್ತಿತ್ವದಲ್ಲಿನ ನಡೆನುಡಿಗಳಲ್ಲಿ ಯಾವುದು ಕೆಟ್ಟದ್ದು/ಯಾವುದು ಒಳ್ಳೆಯದು ಎಂಬುದು ತಮಗೆ ಚೆನ್ನಾಗಿ ತಿಳಿದಿದೆ ಎಂದು ಹೇಳುವರು;

ಗುಣ+ಅನ್+ಅರಿಯರು; ಅನ್=ಅನ್ನು; ಅರಿ=ತಿಳಿ/ಗ್ರಹಿಸು; ಅರಿಯರು=ತಿಳಿಯರು/ತಿಳಿದುಕೊಂಡಿಲ್ಲ;

ತಮ್ಮ ಗುಣವನರಿಯರು=ತಮ್ಮ ನಡೆನುಡಿಯಲ್ಲಿರುವ ಒಳಿತು ಕೆಡುಕನ್ನು/ಇತಿಮಿತಿಗಳನ್ನು/ಕುಂದುಕೊರತೆಗಳನ್ನು ಅರಿತುಕೊಂಡಿಲ್ಲ;

ವ್ಯಕ್ತಿಯು ಇತರರ ಗುಣಾವಗುಣಗಳನ್ನು ಒರೆಹಚ್ಚಿ ನೋಡಿ/ಅಳೆದು ನೋಡಿ, ಅವರ ಬೆಲೆಕಟ್ಟುವುದರ ಬದಲು, ತನ್ನ ನಡೆನುಡಿಯು ಹೇಗಿದೆಯೆಂಬುದನ್ನು ಅರಿತುಕೊಂಡು, ತನ್ನಲ್ಲಿರುವ ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯತನದಿಂದ ಬಾಳುವುದನ್ನು ಕಲಿಯಬೇಕು.



೭) ಇಲಿಗಂಜಿ ಮನೆ ಸುಡುವರುಂಟೆ. (೧೨೦೮-೧೧೧)

ಇಲಿಗೆ+ಅಂಜಿ; ಇಲಿ=ಒಂದು ಬಗೆಯ ಪ್ರಾಣಿ/ಮನೆಗಳಲ್ಲಿ ಹಾಗೂ ಜನವಸತಿಯಿರುವ ಕಡೆಗಳಲ್ಲಿ ಬಿಲ/ಪೊಟರೆಯಲ್ಲಿ ನೆಲೆಸಿರುವ ಪ್ರಾಣಿ; ಅಂಜು=ಹೆದರು;

ಇಲಿಗೆ ಅಂಜಿ=ಇಲಿಯಿಂದ ಅಪಾಯ ಉಂಟಾಗುವುದೆಂದು ಹೆದರಿಕೊಂಡು; ಮನೆ=ವಾಸದ ನೆಲೆ/ಬೀಡು/ನಿವಾಸ; ಸುಡುವರು+ಉಂಟೆ; ಸುಡು=ಬೆಂಕಿಯಲ್ಲಿ ಬೇಯಿಸುವುದು/ಉರಿಯಲ್ಲಿ ಬೇಯುವಂತೆ ಮಾಡುವುದು; ಉಂಟೆ=ಇದ್ದಾರೆಯೆ/ಇರುವರೆ;

ವ್ಯಕ್ತಿಯ ಜೀವನದ ಆಗುಹೋಗುಗಳಲ್ಲಿ ಸಣ್ಣ ಪುಟ್ಟ ಎಡರು ತೊಡರು ಎದುರಾದಾಗ, ಅವಕ್ಕೆ ಅಂಜಿ/ಹಿಮ್ಮೆಟ್ಟಿ ಹತಾಶೆಯಿಂದ ಬದುಕನ್ನು ಹಾಳು ಮಾಡಿಕೊಳ್ಳಬಾರದು. ಕೆಚ್ಚೆದೆಯಿಂದ/ಗಟ್ಟಿ ಮನಸ್ಸಿನಿಂದ ಅಡೆತಡೆಗಳನ್ನು ನಿವಾರಿಸಿಕೊಂಡು ಬಾಳುವುದನ್ನು ಕಲಿಯಬೇಕು ಎಂಬ ಇಂಗಿತವನ್ನು ಈ ನುಡಿಗಳು ಸೂಚಿಸುತ್ತಿವೆ.



೮)    ಎನ್ನ ಕಾಯಕ್ಕೆ ಕಾಹ ಹೇಳುವರಲ್ಲದೆ
ಮನಕ್ಕೆ ಕಾಹ ಹೇಳುವರಿಲ್ಲವಯ್ಯಾ. (೧೦೮೦-೯೭)

ಎನ್ನ=ನನ್ನ; ಕಾಯ=ದೇಹ/ಶರೀರ/ಮಯ್; ಕಾಹು=ಕಾಯುವಿಕೆ/ಪಹರೆ/ಎಚ್ಚರದಿಂದ ಕಾಪಾಡಿಕೊಳ್ಳುವುದು; ಕಾಯಕ್ಕೆ ಕಾಹು=ವ್ಯಕ್ತಿಯು ತನ್ನ ದೇಹಕ್ಕೆ ಯಾವುದೇ ಹಾನಿ ತಟ್ಟದಂತೆ ಎಚ್ಚರಿಕೆಯಿಂದಿರುವುದು/ಮಯ್ಯಿನ ಆರೋಗ್ಯವನ್ನು ಚೆನ್ನಾಗಿ ನೋಡಿಕೊಳ್ಳುವುದು; ಹೇಳುವರ್+ಅಲ್ಲದೆ;

ಎನ್ನ ಕಾಯಕ್ಕೆ ಕಾಹ ಹೇಳುವರು=ಯಾವುದೇ ಬಗೆಯ ಕಾಯಿಲೆ ಕಸಾಲೆಗಳಿಗೆ ಇಲ್ಲವೇ ಅವಗಡಗಳಿಗೆ ಸಿಲುಕಿ ಹಾಳಾಗದಂತೆ ನನ್ನ ದೇಹವನ್ನು ಚೆನ್ನಾಗಿ ನೋಡಿಕೊಳ್ಳುವುದು/ಕಾಪಾಡಿಕೊಳ್ಳುವುದು ಎಂಬ ಮಾತುಗಳನ್ನು ನನ್ನವರೆಲ್ಲರೂ ಜೀವನದಲ್ಲಿ ನನಗೆ ಪದೇ ಪದೇ ಹೇಳುತ್ತಿರುತ್ತಾರೆ; ಅಲ್ಲದೆ=ಹಾಗೆ ಹೇಳುವುದನ್ನು ಬಿಟ್ಟು/ಅದನ್ನು ಹೊರತು ಪಡಿಸಿ;

ಮನ=ಮನಸ್ಸು/ಚಿತ್ತ; ಮನಕ್ಕೆ ಕಾಹು=ಮನಸ್ಸನ್ನು ಹಾಳಾಗದಂತೆ ಕಾಪಾಡಿಕೊಳ್ಳುವುದು/ಮನದಲ್ಲಿ ಮೂಡುವ ಒಳ್ಳೆಯ ಮತ್ತು ಕೆಟ್ಟ ಒಳಮಿಡಿತಗಳಲ್ಲಿ, ಕೆಟ್ಟದ್ದನ್ನು ಹತ್ತಿಕ್ಕಿಕೊಂಡು, ಒಳ್ಳೆಯ ನಡೆನುಡಿಗಳಿಂದ ಬಾಳಬೇಕೆಂಬ ಅರಿವು ಮತ್ತು ಎಚ್ಚರವನ್ನು ಹೊಂದಿರುವುದು; ಹೇಳುವರ್+ಇಲ್ಲ+ಅಯ್ಯಾ;

ಮನಕ್ಕೆ ಕಾಹ ಹೇಳುವರಿಲ್ಲವಯ್ಯಾ=ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಒಳ್ಳೆಯ ಅರಿವನ್ನು ಪಡೆದು ಎಚ್ಚರದಿಂದ ಬಾಳನ್ನು ನಡೆಸು ಎಂದು ಹೇಳುವವರು ಇಲ್ಲ;



೯) ಎನ್ನವರೆನಗೊಲಿದು
ಹೊನ್ನಶೂಲವನಿಕ್ಕಿದರಯ್ಯಾ

ಅಹಂಕಾರ ಪೂರಾಯ ಗಾಯದಲ್ಲಿ
ಆನೆಂತು ಬದುಕುವೆನೆಂತು ಜೀವಿಸುವೆ. (೩೮೮-೩೯)

(ಎನ್ನ್+ಅವರ್+ಎನಗೆ+ಒಲಿದು; ಎನ್ನ್=ನಾನು; ಎನ್ನ=ನನ್ನ; ಎನ್ನವರ್= ನನ್ನವರು/ನನ್ನೊಡನೆ ನಂಟನ್ನು ಹೊಂದಿರುವ ವ್ಯಕ್ತಿಗಳು/ನನ್ನ ಒಡನಾಡಿಗಳು/ನನ್ನ ನೆರೆಹೊರೆಯವರು; ಎನಗೆ=ನನಗೆ; ಒಲಿ=ಮೆಚ್ಚು/ಪ್ರೀತಿಸು/ಒಪ್ಪು; ಒಲಿದು=ಮೆಚ್ಚಿಕೊಂಡು/ ಪ್ರೀತಿಸುತ್ತ/ಒಪ್ಪಿಕೊಂಡು; ಎನ್ನವರೆನಗೊಲಿದು=ನನ್ನೊಡನೆ ನಂಟನ್ನು ಹೊಂದಿರುವ ವ್ಯಕ್ತಿಗಳು ನನ್ನನ್ನು ಬಹಳವಾಗಿ ಮೆಚ್ಚಿಕೊಂಡು/ಒಪ್ಪಿಕೊಂಡು/ಪ್ರೀತಿಸುತ್ತ;

ಹೊನ್ನಶೂಲ+ಅನ್+ಇಕ್ಕಿದರ್+ಅಯ್ಯಾ: ಹೊನ್ನು=ಚಿನ್ನ/ಬಂಗಾರ/ಸ್ವರ್ಣ/ಕಸವರ; ಶೂಲ=ಮರಣದಂಡನೆಗೆ ಗುರಿಯಾದವರ ಕೊರಳಿಗೆ ಹಾಕುವ ಉರುಳಿನಿಂದ ಕೂಡಿದ ನೇಣುಗಂಬ. ಈ ನೇಣುಗಂಬವನ್ನು ಮರ ಇಲ್ಲವೇ ಕಬ್ಬಿಣದ ಕಂಬ ಮತ್ತು ತೊಲೆಗಳಿಂದ ಮಾಡಿರುತ್ತಾರೆ; ಹೊನ್ನಶೂಲ=ಚಿನ್ನದ ಹೊರಕವಚದಿಂದ ಕೂಡಿದ ಕಂಬ ಮತ್ತು ತೊಲೆಗಳಿಂದ ಮಾಡಿರುವ ಶೂಲ; ಅನ್=ಅನ್ನು; ಇಕ್ಕು=ಹಾಕು/ಇಡು; ಇಕ್ಕಿದರ್= ಹಾಕಿದರು/ಏರಿಸಿದರು;

ಅಹಂಕಾರ+ಪೂರಾಯ; ಅಹಂಕಾರ=ನಾನೇ ದೊಡ್ಡವನು/ತಿಳಿದವನು ಎಂಬ ಸೊಕ್ಕಿನ ನಡೆನುಡಿ/ಗರ್ವ/ಹಮ್ಮು/ಹೆಮ್ಮೆ; ಪೂರಾಯ=ಹೆಚ್ಚಾದ/ಅತಿಯಾದ; ಗಾಯ=ದೇಹಕ್ಕೆ ಪೆಟ್ಟು ಬಿದ್ದಾಗ, ಆ ಜಾಗದಲ್ಲಿ ನೆತ್ತರು ಹೊರಬರುವುದು ಇಲ್ಲವೇ ಊದಿಕೊಳ್ಳುವುದು;

ಅಹಂಕಾರ ಪೂರಾಯ ಗಾಯದಲ್ಲಿ=ಈ ನುಡಿಯು ಒಂದು ರೂಪಕವಾಗಿ ಬಳಕೆಯಾಗಿದೆ. ಹೊಗಳಿಕೆಗೆ ಮರುಳಾದ ವ್ಯಕ್ತಿಯ ಮನದಲ್ಲಿ ನಾನೇ ದೊಡ್ಡವನು/ ನನ್ನಿಂದಲೇ ಎಲ್ಲವೂ ನಡೆಯುತ್ತಿದೆ ಎಂಬ ಒಳಮಿಡಿತವು ಆವರಿಸಿಕೊಳ್ಳುತ್ತಿದ್ದಂತೆಯೇ, ಆತನ ನಡೆನುಡಿಗಳು ಆಡಂಬರಕ್ಕೆ/ತೋರಿಕೆಗೆ ಒಳಗಾಗುತ್ತವೆ. ದೇಹಕ್ಕೆ ಪೆಟ್ಟು ಬಿದ್ದಾಗ ಉಂಟಾಗುವ ರಣಗಾಯದಂತೆಯೇ, ಅಹಂಕಾರಕ್ಕೆ ಒಳಗಾದ ವ್ಯಕ್ತಿಯ ಒಳ್ಳೆಯ

ವ್ಯಕ್ತಿತ್ವವೂ ಊನಗೊಳ್ಳುತ್ತದೆ/ಹಾಳಾಗುತ್ತದೆ ಎಂಬ ತಿರುಳಿನಲ್ಲಿ ಈ ರೂಪಕವು ಬಳಕೆಯಾಗಿದೆ.

ಆನ್+ಎಂತು; ಆನ್=ನಾನು; ಎಂತು=ಯಾವ ರೀತಿಯಲ್ಲಿ/ಯಾವ ಬಗೆಯಲ್ಲಿ; ಬದುಕುವೆನ್+ಎಂತು; ಬದುಕು=ಜೀವನ/ಬಾಳು; ಆನೆಂತು ಬದುಕುವೆನ್=ನಾನು ಹೇಗೆ ಜೀವನವನ್ನು ನಡೆಸಲಿ/ಬಾಳನ್ನು ರೂಪಿಸಿಕೊಳ್ಳಲಿ; ಜೀವಿಸು=ಜೀವನವನ್ನು ನಡೆಸು;

ಆನೆಂತು ಬದುಕುವೆನೆಂತು ಜೀವಿಸುವೆ=ಮನದಲ್ಲಿ ಅಹಂಕಾರದ ಒಳಮಿಡಿತದಿಂದ ಕೂಡಿದವನಾಗಿ, ಸರಳವಾದ ಮತ್ತು ಸಹಜವಾದ ಬದುಕಿನ ನಡೆನುಡಿಗಳನ್ನೇ ಮರೆತಿರುವ ನಾನು ಇನ್ನು ಮುಂದೆ ಹೇಗೆ ತಾನೆ ಒಳ್ಳೆಯ ಜೀವನವನ್ನು ನಡೆಸುವುದಕ್ಕೆ ಆಗುತ್ತದೆ ಎಂಬ ಕಳವಳಕ್ಕೆ/ಆತಂಕಕ್ಕೆ ವ್ಯಕ್ತಿಯು ಒಳಗಾಗಿದ್ದಾನೆ.



൧൦) ಏನ ಮಾಡಿದಡೇನಯ್ಯಾ
ಎನ್ನಲ್ಲಿ ದಿಟವಿಲ್ಲದನ್ನಕ್ಕರ

ಏನ ಹಮ್ಮಿದಡೇನಯ್ಯಾ
ಎನ್ನಲ್ಲಿ ದಿಟವಿಲ್ಲದನ್ನಕ್ಕರ. (೧೩೮೮-೧೨೮)

ಏನ್=ಯಾವುದು; ಏನ=ಯಾವುದನ್ನು ತಾನೆ; ಮಾಡಿದಡೆ+ಏನ್+ಅಯ್ಯಾ; ಮಾಡು=ನೆರವೇರಿಸು/ನಡೆಸು/ಆಚರಿಸು/ಕೆಲಸದಲ್ಲಿ ತೊಡಗು; ಮಾಡಿದಡೆ=ಮಾಡಿದರೆ;

ಎನ್ನ+ಅಲ್ಲಿ; ಎನ್ನ=ನನ್ನ; ನನ್ನಲ್ಲಿ=ನನ್ನ ನಡೆನುಡಿಯಲ್ಲಿ/ವರ್ತನೆಯಲ್ಲಿ/ವ್ಯವಹಾರದಲ್ಲಿ; ದಿಟ+ಇಲ್ಲದ+ಅನ್ನಕ್ಕರ;

ದಿಟ=ಸತ್ಯ/ನಿಜ/ವಾಸ್ತವ; ಅನ್ನಕ್ಕರ=ವರೆಗೆ/ತನಕ; ದಿಟವಿಲ್ಲದನ್ನಕ್ಕರ=ನಿಜವಿಲ್ಲದಿರುವ ತನಕ/ ಒಳ್ಳೆಯ ನಡೆನುಡಿಗಳು ಇಲ್ಲವೆಂದಮೇಲೆ;

ಏನ ಮಾಡಿದಡೇನಯ್ಯಾ ಎನ್ನಲ್ಲಿ ನಿಜವಿಲ್ಲದನ್ನಕ್ಕರ=ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತಾಗುವಂತಹ ನಡೆನುಡಿಗಳನ್ನು ಹೊಂದದಿರುವ ವ್ಯಕ್ತಿಯು ಮಾಡುವ ಯಾವುದೇ ಬಗೆಯ ಕೆಲಸಗಳಿಂದ ಏನೊಂದು ಪ್ರಯೋಜನವಿಲ್ಲ;

ಹಮ್ಮಿದಡೆ+ಏನ್+ಅಯ್ಯಾ; ಹಮ್ಮು=ಯೋಜಿಸು/ವಿಚಾರಮಾಡು/ಕಯ್ಗೊಂಡ ಕೆಲಸವನ್ನು ಮಾಡಿಮುಗಿಸಲು ಹಲವು ರೀತಿಯಲ್ಲಿ ಚಿಂತಿಸುವುದು;

ಏನ ಹಮ್ಮಿದಡೇನಯ್ಯಾ ಎನ್ನಲ್ಲಿ ದಿಟವಿಲ್ಲದನ್ನಕ್ಕರ=ಒಳ್ಳೆಯ ನಡೆನುಡಿಗಳಿಲ್ಲದ ವ್ಯಕ್ತಿಯು ಹಾಕಿಕೊಳ್ಳುವ ಯಾವ ಯೋಜನೆಗಳಿಂದಲೂ ಯಾರಿಗೂ ಒಳಿತಾಗುವುದಿಲ್ಲ. ಏಕೆಂದರೆ ದಿಟದ ನಡೆನುಡಿಗಳಿಲ್ಲದ ವ್ಯಕ್ತಿಯ ಜೀವನವು ಸುಳ್ಳು/ಕಪಟತನದಿಂದ ಕೂಡಿರುತ್ತದೆ.



## ೧೧) ಒಳಗೆ ಕುಟಿಲ ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ ಬಲ್ಲನೊಲ್ಲನಯ್ಯಾ ಲಿಂಗವು ಅವರು ಶಿವಪಥಕ್ಕೆ ಸಲ್ಲರು ಸಲ್ಲರಯ್ಯಾ. (೯೬-೧೮)

ಒಳಗೆ=ಮನಸ್ಸಿನಲ್ಲಿ/ಚಿತ್ತದಲ್ಲಿ/ಅಂತರಂಗದಲ್ಲಿ; ಕುಟಿಲ=ಮೋಸ/ವಂಚನೆ;

ಒಳಗೆ ಕುಟಿಲ=ಅಂತರಂಗದ ಮನದಲ್ಲಿ ಇತರರನ್ನು ವಂಚಿಸಿ ತನ್ನ ಆಸೆಯನ್ನು ಈಡೇರಿಸಿ೧೧೧ಕೊಳ್ಳಬೇಕೆಂಬ ಆಲೋಚನೆ;

ಹೊರಗೆ=ಬಹಿರಂಗದಲ್ಲಿ/ನಿತ್ಯ ಜೀವನದ ವ್ಯವಹಾರಗಳಲ್ಲಿ/ಇತರರ ಒಡನಾಟದಲ್ಲಿ; ವಿನಯ+ಆಗಿ; ವಿನಯ=ನಮ್ರತೆ/ತಗ್ಗಿ ಬಗ್ಗಿ ನಡೆಯುವುದು;

ಹೊರಗೆ ವಿನಯ= ಬಹಿರಂಗದ ವ್ಯವಹಾರಗಳಲ್ಲಿ ವ್ಯಕ್ತಿಯು ಇತರರಿಗೆ ಒಳಿತನ್ನು ಮಾಡುವವನಂತೆ ನಡೆದುಕೊಳ್ಳುವುದು;

ಭಕ್ತರ್+ಎನಿಸಿಕೊಂಬವರ; ಭಕ್ತ=ಒಳ್ಳೆಯ ನಡೆನುಡಿಗಳೇ ದೇವರನ್ನು ಒಲಿಸಿಕೊಳ್ಳುವ ಆಚರಣೆಯೆಂದು ತಿಳಿದುಕೊಂಡು ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುತ್ತಿರುವ ವ್ಯಕ್ತಿ; ಎನ್=ಹೇಳು/ನುಡಿ; ಎನಿಸು=ಎಂದು ಹೇಳುವ ಹಾಗೆ ಮಾಡು; ಎನಿಸಿಕೊಂಬವರ=ಎನಿಸಿಕೊಳ್ಳುವವರನ್ನು/ಎಂದು ಕರೆಯಿಸಿ ಕೊಳ್ಳುವವರನ್ನು; ಬಲ್ಲನ್+ಒಲ್ಲನ್+ಅಯ್ಯಾ;

ಬಲ್=ತಿಳಿ/ಅರಿ; ಬಲ್ಲನ್=ತಿಳಿದಿರುವನು/ಅರಿತಿರುವನು; ಒಲ್=ಮೆಚ್ಚು/ಒಪ್ಪು/ಸಮ್ಮತಿಸು; ಒಲ್ಲನ್=ನಿರಾಕರಿಸುತ್ತಾನೆ/ತಿರಸ್ಕರಿಸುತ್ತಾನೆ/ತನ್ನವರೆಂದು ಮೆಚ್ಚುವುದಿಲ್ಲ; ಲಿಂಗ=ಈಶ್ವರ; ಅವರು=ಒಳಗೊಂದು ಹೊರಗೊಂದು ಬಗೆಯ ನಡೆನುಡಿಯುಳ್ಳವರು/ಬಾಯಲ್ಲಿ ಒಳಿತನ್ನು ಹೇಳುತ್ತ, ಕಯ್ಯಲ್ಲಿ ಕೆಟ್ಟದ್ದನ್ನು ಮಾಡುತ್ತಿರುವ ವ್ಯಕ್ತಿಗಳು; ಶಿವ=ಈಶ್ವರ; ಪಥ=ದಾರಿ/ಮಾರ್ಗ/ಹಾದಿ; ಶಿವಪಥ=ಒಳ್ಳೆಯ ನಡೆನುಡಿಯಲ್ಲಿ ಬದುಕನ್ನು ನಡೆಸುವುದು;

ಸಲ್=ಒಪ್ಪಿಗೆಯಾಗು/ಯೋಗ್ಯವಾಗಿರು/ತಕ್ಕುದಾಗಿರು/ಸಮ್ಮತವಾಗು; ಸಲ್ಲರು=ಒಪ್ಪಿಗೆಯಾಗುವುದಿಲ್ಲ/ಯೋಗ್ಯರಾಗುವುದಿಲ್ಲ/ತಕ್ಕವರು ಎನಿಸುವುದಿಲ್ಲ; ಸಲ್ಲರ್+ಅಯ್ಯಾ;

ಅಂತರಂಗದ ಮನದಲ್ಲಿ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೆಡುಕನ್ನು ಮಾಡುವ ಒಳಮಿಡಿತಗಳಿಂದ ಕೂಡಿ, ಬಹಿರಂಗದಲ್ಲಿ ಒಳ್ಳೆಯವರಂತೆ ನಟಿಸುವ ವ್ಯಕ್ತಿಗಳು ಶಿವನ ಒಲವಿಗೆ/ಕರುಣೆಗೆ ಪಾತ್ರರಾಗುವುದಿಲ್ಲ. ❖

೧೨) ಓದಿನ ಹಿರಿಯರು ವೇದದ ಹಿರಿಯರು
ಶಾಸ್ತ್ರದ ಹಿರಿಯರು ಪುರಾಣದ ಹಿರಿಯರು
ವೇಷದ ಹಿರಿಯರು ಭಾಷೆಯ ಹಿರಿಯರು

ಇವರೆಲ್ಲರು

ತಮ್ಮ ತಮ್ಮನೆ ಮೆರೆದರಲ್ಲದೆ
ನಿಮ್ಮ ಮೆರೆದುದಿಲ್ಲ. (೧೧೧೫-೧೦೧)

ಓದು=ಕಲಿ/ಲಿಪಿರೂಪದ ಬರಹದಲ್ಲಿನ ವಿಚಾರಗಳನ್ನು ತಿಳಿಯುವುದು; ಹಿರಿ=ದೊಡ್ಡದು/ಮಿಗಿಲಾದುದು; ಹಿರಿಯರು=ವಯಸ್ಸಿನಲ್ಲಿ ದೊಡ್ಡವರು/ಹೆಚ್ಚಾಗಿ ತಿಳಿದವರು/ಲೋಕಜೀವನದ ಆಗುಹೋಗುಗಳನ್ನು ಚೆನ್ನಾಗಿ ತಿಳಿದವರು;

ಓದಿನ ಹಿರಿಯರು=ನೂರಾರು ಹೊತ್ತಿಗೆಗಳನ್ನು ಓದಿ, ಅಪಾರವಾದ ತಿಳುವಳಿಕೆಯನ್ನು ತಮ್ಮದಾಗಿಸಿಕೊಂಡಿರುವವರು;

ವೇದ=ಅರಿವು/ತಿಳುವಳಿಕೆ; ಇಂಡಿಯಾದೇಶದಲ್ಲಿದ್ದ ಪ್ರಾಚೀನ ಜನಸಮುದಾಯದವರು ನಿಸರ್ಗ ದೇವತೆಗಳನ್ನು ಪೂಜಿಸುತ್ತಿದ್ದ ಆಚರಣೆಗಳ ವಿವರವನ್ನು ಒಳಗೊಂಡ 'ಋಗ್ವೇದ-ಯಜುರ್ವೇದ-ಅಥರ್ವಣ ವೇದ-ಸಾಮವೇದ' ಎಂಬ ನಾಲ್ಕು ವೇದಗಳು;

ವೇದದ ಹಿರಿಯರು=ನಾಲ್ಕು ವೇದಗಳನ್ನು ಚೆನ್ನಾಗಿ ಓದಿ ಕರಗತ ಮಾಡಿಕೊಂಡಿರುವ ವ್ಯಕ್ತಿಗಳು;

ಶಾಸ್ತ್ರ=ದೇವತೆಗಳ ಪೂಜೆಯಲ್ಲಿ ಅನುಸರಿಸಬೇಕಾದ ಸಂಪ್ರದಾಯಗಳನ್ನು ಮತ್ತು ವ್ಯಕ್ತಿಯ ಹುಟ್ಟು/ಮದುವೆ/ಸಾವಿನ ಸನ್ನಿವೇಶಗಳಲ್ಲಿ ಮಾಡಬೇಕಾದ ಆಚರಣೆಗಳನ್ನು ವಿವರಿಸುವ ಹೊತ್ತಿಗೆ;

ಶಾಸ್ತ್ರದ ಹಿರಿಯರು=ಪೂಜೆಯ ಆಚರಣೆಗಳಲ್ಲಿ ಪರಿಣಿತರಾದವರು;

ಪುರಾಣ=ಜಗತ್ತಿನ ಹುಟ್ಟು, ಜೀವರಾಶಿಗಳ ಉಗಮ, ದೇವರ ಇರುವಿಕೆ ಮತ್ತು ಮಾನವ ಸಮುದಾಯದ ಬೆಳವಣಿಗೆಯ ಬಗ್ಗೆ ಜನಮನದ ಕಲ್ಪನೆಯಲ್ಲಿ

ರೂಪುಗೊಂಡಿರುವ ಸಂಗತಿಯನ್ನೊಳಗೊಂಡ ಕತೆ. ಇಂಡಿಯಾದ ಜನಸಮುದಾಯದ ಮನದಲ್ಲಿ ಹದಿನೆಂಟು ಪುರಾಣಗಳು ರೂಪುಗೊಂಡಿವೆ;

ಪುರಾಣದ ಹಿರಿಯರು= ಹದಿನೆಂಟು ಪುರಾಣಗಳ ಬಗ್ಗೆ ಚೆನ್ನಾಗಿ ಅರಿತವರು;

ವೇಷ=ಮಯ್ಯ ಮೇಲೆ ಉಟ್ಟುಕೊಳ್ಳುವ ಬಟ್ಟೆ ಮತ್ತು ತೊಟ್ಟುಕೊಳ್ಳುವ ಒಡವೆ;

ವೇಷದ ಹಿರಿಯರು=ತಾವು ಉಡುವ ಬಟ್ಟೆಬರೆಗಳಿಂದ ಮತ್ತು ತೊಡುವ ಒಡವೆ ವಸ್ತುಗಳಿಂದಲೇ ಜನರ ಮುಂದೆ ತಮ್ಮನ್ನು ತಾವು "ದೇವ ಮಾನವರು/ಜಾತಿ ಜಗದ್ಗುರುಗಳು/ಸಮಾಜದ ಹಿತವನ್ನು ಕಾಪಾಡುವವರು" ಎಂದು ತೋರಿಸಿಕೊಳ್ಳುವ/ಬಿಂಬಿಸಿಕೊಳ್ಳುವ ವ್ಯಕ್ತಿಗಳು;

ಇವರ್+ಎಲ್ಲರು; ತಮ್ಮ ತಮ್ಮನೆ=ವ್ಯಕ್ತಿಯಾಗಿ ತಮ್ಮನ್ನು ಕುರಿತು ಮಾತ್ರ/ತಮ್ಮೊಬ್ಬರನ್ನು; ಮರೆ=ಇತರರ ಮುಂದೆ ತಮ್ಮನ್ನು ತಾವು ಹೊಗಳಿಕೊಳ್ಳುವುದು/ದೊಡ್ಡವರೆಂದು ಹೇಳಿಕೊಳ್ಳುವುದು/ತಾವು ಕಲಿತಿರುವ ವಿದ್ಯೆಯನ್ನು ಮತ್ತು ತಮ್ಮ ಮಾತಿನ ಕುಶಲತೆಯನ್ನು ಆಡಂಬರದಿಂದ ತೋರಿಸಿಕೊಳ್ಳುವುದು/ಅಹಂಕಾರದಿಂದ ಬೀಗುವುದು;

ನಿಮ್ಮ=ಒಳ್ಳೆಯ ನಡೆನುಡಿಗಳ ಸಂಕೇತವಾದ ದೇವರಾದ ಕೂಡಲಸಂಗಮನನ್ನು; ಮರೆದುದು+ಇಲ್ಲ;

ನಿಮ್ಮ ಮರೆಯುವುದು=ಕೂಡಲಸಂಗಮನನ್ನು ದೊಡ್ಡವನೆಂದು ಹೇಳುವುದು. ಅಂದರೆ ನಿತ್ಯ ಜೀವನದಲ್ಲಿ ವ್ಯಕ್ತಿಯು ಒಳ್ಳೆಯ ನಡೆನುಡಿಗಳಿಂದ ಬಾಳುತ್ತ, ತನ್ನ ಒಳಿತಿನ ಜತೆಜತೆಗೆ ಸಹಮಾನವರ ಮತ್ತು ಸಮಾಜದ ಹಿತವನ್ನು ಕಾಪಾಡುವುದು. ಶಿವಶರಣಶರಣೆಯರ ಪಾಲಿನ ದೇವರು ಮಣ್ಣು/ಮರ/ಕಲ್ಲು/ಲೋಹದಿಂದ ಮಾಡಿದ ವಿಗ್ರಹ/ಮೂರ್ತಿಯಾಗಿರಲಿಲ್ಲ. ವ್ಯಕ್ತಿಯು ತನ್ನ ನಿತ್ಯದ ಬದುಕಿನಲ್ಲಿ ಆಚರಿಸುವ ಒಳ್ಳೆಯ ನಡೆನುಡಿಯೇ ಅವರಿಗೆ ದೇವರಾಗಿತ್ತು.

ನಿಮ್ಮ ಮರೆದುದಿಲ್ಲ=ಸಮಾಜದಲ್ಲಿ ತಮ್ಮನ್ನು ತಾವು ದೊಡ್ಡವರು/ಹಿರಿಯರು ಎಂದು ತೋರಿಸಿಕೊಳ್ಳುತ್ತಿರುವ/ಹೇಳಿಕೊಳ್ಳುತ್ತಿರುವ ವ್ಯಕ್ತಿಗಳಲ್ಲಿ ಬಹುತೇಕ ಮಂದಿ ತಮ್ಮ ದಿನನಿತ್ಯದ ಜೀವನದಲ್ಲಿ ಒಳ್ಳೆಯ ನಡೆನುಡಿಗಳಿಂದ ಬಾಳುತ್ತಿಲ್ಲ;



೧೩) ಓದಿಸುವಣ್ಣಗಳೆನ್ನ ಮಾತಾಡ ಕಲಿಸಿದರಲ್ಲದೆ
ಮನಕ್ಕೆ ಮಾತಾಡ ಕಲಿಸಲಿಲ್ಲವಯ್ಯಾ. (೧೧೧೬-೧೦೧)

ಓದು=ಕಲಿ/ಲಿಪಿರೂಪದ ಬರಹದಲ್ಲಿನ ವಿಚಾರಗಳನ್ನು ತಿಳಿಯುವುದು; ಓದಿಸುವ+ಅಣ್ಣಗಳ್+ಎನ್ನ; ಓದಿಸುವ=ವಿದ್ಯೆಯನ್ನು ಕಲಿಸುವ/ಅಕ್ಕರದ ಉಚ್ಚಾರ ಮತ್ತು ಬರಹವನ್ನು ಹೇಳಿಕೊಡುವ; ಅಣ್ಣ=ವಯಸ್ಸಿನಲ್ಲಿ ಹಿರಿಯವನು; ಅಣ್ಣಗಳು=ಗುರುಗಳು; ಎನ್ನ=ನನ್ನನ್ನು; ಮಾತು+ಆಡ; ಮಾತು=ನುಡಿ/ಸೊಲ್ಲು; ಆಡು=ಉಚ್ಚರಿಸು/ಹೇಳು; ಮಾತಾಡ=ಮಾತನ್ನಾಡಲು; ಕಲಿಸಿದರ್+ಅಲ್ಲದೆ; ಕಲಿ=ಅರಿ/ತಿಳಿ; ಕಲಿಸು=ತಿಳಿಯುವಂತೆ ಹೇಳು/ಅರಿಯುವಂತೆ ತರಬೇತಿಯನ್ನು ನೀಡು;

ಓದಿಸುವಣ್ಣಗಳೆನ್ನ ಮಾತಾಡ ಕಲಿಸಿದರು=ಅಕ್ಕರದ ಓದು ಬರಹವನ್ನು ಹೇಳಿಕೊಟ್ಟ ಗುರುಗಳು ಮಾತನಾಡುವ ಕಲೆಯಲ್ಲಿ ನನ್ನನ್ನು ಪರಿಣತನನ್ನಾಗಿ ಮಾಡಿದರು. ಅಂದರೆ ಕೇಳುವವರ ಮನ ಸೆಳೆಯುವಂತೆ, ಮನ ಮೆಚ್ಚಿಸುವಂತೆ ಮತ್ತು ಅವರನ್ನು ಮರುಳುಗೊಳಿಸುವಂತೆ ಮಾತನಾಡುವುದರಲ್ಲಿ ನಾನು ಜಾಣನಾದೆನು; ಅಲ್ಲದೆ=ಅದನ್ನು ಬಿಟ್ಟು/ಹೊರತು ಪಡಿಸಿ;

ಮನ=ಮನಸ್ಸು; ಕಲಿಸಲ್+ಇಲ್ಲ+ಅಯ್ಯಾ; ಕಲಿಸಲಿಲ್ಲ=ಹೇಳಿಕೊಡಲಿಲ್ಲ/ ಅರಿಯುವಂತೆ ಮಾಡಲಿಲ್ಲ;

ಮನಕ್ಕೆ ಮಾತಾಡ ಕಲಿಸುವುದು=ವ್ಯಕ್ತಿಯು ತನ್ನ ಮನದಲ್ಲಿ ತುಡಿಯುವ ಒಳಮಿಡಿತಗಳಲ್ಲಿ ಯಾವುದು ಕೆಟ್ಟದ್ದು/ಯಾವುದು ಒಳ್ಳೆಯದು ಎಂಬುದನ್ನು ಒರೆಹಚ್ಚಿನೋಡಿ, ಕೆಟ್ಟದ್ದನ್ನು ಹತ್ತಿಕ್ಕಿಕೊಂಡು ಬಾಳಬೇಕೆಂಬ ಅರಿವು ಮತ್ತು ಎಚ್ಚರವನ್ನು ಹೊಂದುವುದು.

ವ್ಯಕ್ತಿಯು ತನ್ನ ಕಣ್ಣ ಮುಂದಿನ ನಿಸರ್ಗದಲ್ಲಿನ ಆಗುಹೋಗುಗಳನ್ನು ಅರಿತುಕೊಂಡು, ತಾನು ಬಾಳುತ್ತಿರುವ ಸಮಾಜದ ಆಚರಣೆಗಳಲ್ಲಿ/ನಡೆನುಡಿಗಳಲ್ಲಿ ಒಟ್ಟು ಜನಸಮುದಾಯದ ಹಿತಕ್ಕೆ ಯಾವುದು ನೆರವಾಗುತ್ತದೆ/ಯಾವುದು ಹಾನಿಯನ್ನುಂಟುಮಾಡುತ್ತದೆ ಎಂಬುದನ್ನು ಮನದಲ್ಲಿ ಚಿಂತಿಸಿ ನೋಡಿ, ಜನಸಮುದಾಯವು ನೆಮ್ಮದಿಯಿಂದ ಕೂಡಿಬಾಳುವುದಕ್ಕೆ

ನೆರವಾಗುವ ಆಚರಣೆಗಳನ್ನು/ನಡೆನುಡಿಗಳನ್ನು ಒಪ್ಪಿಕೊಂಡು, ಕೇಡನ್ನು ಬಗೆಯುವ ಆಚರಣೆಗಳನ್ನು ತೊರೆದು ಬಾಳಬೇಕೆಂಬ ವಿವೇಕವನ್ನು ಹೊಂದುವುದು;

ಮನಕ್ಕೆ ಮಾತಾಡ ಕಲಿಸಲಿಲ್ಲವಯ್ಯಾ=ವ್ಯಕ್ತಿಯು ತನ್ನ ಮನದಲ್ಲಿ ಮೂಡುವ ಒಳಿತು ಕೆಡುಕಿನ ಸಂಗತಿಗಳನ್ನು ಒರೆಹಚ್ಚಿನೋಡಿ, ಕೆಡುಕನ್ನು ತೊರೆದು, ಒಳ್ಳೆಯತನದಿಂದ ಬಾಳಬೇಕೆಂಬುದನ್ನು ಕಲಿಸಲಿಲ್ಲ.



## ೧೪) ಕುಲಮದವಳಿಯದನ್ನಕ್ಕ ಶರಣನಾಗಲೇಕೆ? (೮೬೯-೭೮)

ಕುಲ+ಮದ+ಅಳಿಯದ+ಅನ್ನಕ್ಕ; ಕುಲ=ಜಾತಿ/ಮತ/ವಂಶ/ಮನೆತನ; ಮದ=ಸೊಕ್ಕು/ಗರ್‍ವ/ಹೆಮ್ಮೆ;

"ಕುಲಮದ" ಎಂದರೆ ವ್ಯಕ್ತಿಯು ತಾನು ಹುಟ್ಟಿ ಬೆಳೆದು ಬಾಳುತ್ತಿರುವ ಜಾತಿ/ಮತ/ವಂಶ/ಮನೆತನವು ಮೇಲಿನದು/ದೊಡ್ಡದು/ಪವಿತ್ರವಾದುದು ಎಂಬ ತಿಳಿಗೇಡಿತನದ ಒಳಮಿಡಿತಕ್ಕೆ ಒಳಗಾಗಿ, ಸಮಾಜದಲ್ಲಿರುವ ಇನ್ನಿತರ ಜಾತಿ/ಮತ/ವಂಶ/ಮನೆತನಕ್ಕೆ ಸೇರಿದ ಜನಸಮುದಾಯವನ್ನು ಕೀಳೆಂದು ಕಡೆಗಣಿಸಿ, ಸೊಕ್ಕಿನಿಂದ ಕೊಬ್ಬಿ ಮೆರೆಯುವ ನಡೆನುಡಿ.

ಇನ್ನಿತರ ಜಾತಿ/ಮತಗಳಿಗೆ ಸೇರಿದ ವ್ಯಕ್ತಿಗಳು ವಿದ್ಯೆಯನ್ನು ಪಡೆದು, ಅರಿವನ್ನು ಹೊಂದಿ, ಒಳ್ಳೆಯ ಗದ್ದುಗೆಯನ್ನೇರಿ, ಆಸ್ತಿಪಾಸ್ತಿ, ಹಣಕಾಸನ್ನು ಸಂಪಾದಿಸಿ ಸಮಾಜದಲ್ಲಿ ತಲೆಯೆತ್ತಿ ಬಾಳುವುದನ್ನು ಕುಲಮದವುಳ್ಳ ವ್ಯಕ್ತಿಗಳು ಸಹಿಸುವುದಿಲ್ಲ.

ಜಾತಿ/ಮತ/ದೇವರ ಹೆಸರಿನಲ್ಲಿ ಇಲ್ಲಸಲ್ಲದ/ಸುಳ್ಳಿನಿಂದ ಕೂಡಿದ/ಕಟ್ಟುಕತೆಯ ಸಂಗತಿಗಳನ್ನು ಹರಡುತ್ತಾ, ನೂರೆಂಟು ಬಗೆಯ ಜಾತಿ/ಮತಗಳಿಂದ ಹೆಣೆದುಕೊಂಡು ರೂಪುಗೊಂಡಿರುವ ಸಮಾಜದ ಜನಸಮುದಾಯಗಳ ಮನದಲ್ಲಿ ಪರಸ್ಪರ ಅನುಮಾನದ/ಅಪನಂಬಿಕೆಯ/ಹಗೆತನದ ಬೆಂಕಿ ಹತ್ತಿ ಉರಿಯುವಂತೆ ಮಾಡುತ್ತಾ, ಸಮಾಜದಲ್ಲಿನ ಜನತೆಯು ಒಗ್ಗಟ್ಟಿನಿಂದ ಜತೆಗೂಡಿ ನೆಮ್ಮದಿಯಿಂದ ಬದುಕನ್ನು ನಡೆಸದಂತಹ ಹುನ್ನಾರಗಳನ್ನು ಕುಲಮದವುಳ್ಳ ವ್ಯಕ್ತಿಗಳು ಹೂಡುತ್ತಿರುತ್ತಾರೆ;

ಅಳಿ=ಇಲ್ಲವಾಗು/ನಾಶವಾಗು; ಅನ್ನಕ್ಕ=ವರೆಗೆ/ತನಕ; ಅಳಿಯದನ್ನಕ್ಕ=ಇಲ್ಲವಾಗುವ ವರೆಗೆ/ನಾಶವಾಗುವ ತನಕ;

ಶರಣನ್+ಆಗಲು+ಏಕೆ; ಶರಣ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು/ಶಿವನನ್ನು ಒಲಿದವನು/ಶಿವನನ್ನು ಪೂಜಿಸುವವನು;

ಶರಣನಾಗಲು=ಶಿವನನ್ನು ಒಲಿಯುವ/ಪೂಜಿಸುವ ವ್ಯಕ್ತಿಯಾಗಲು; ಏಕೆ=ಏನು ತಾನೆ ಪ್ರಯೋಜನ;

ಕುಲಮದದಿಂದ ಬರುವ ಕೆಟ್ಟ ನಡೆನುಡಿಗಳನ್ನು ಬಿಡದೆ ಕೇವಲ ಶರಣನ ಉಡುಗೆ ತೊಡುಗೆಗಳನ್ನು ಹಾಕಿಕೊಂಡು, ತನ್ನನ್ನು ಶಿವಶರಣನೆಂದು ಹೇಳಿಕೊಳ್ಳುವುದರಿಂದ ಪ್ರಯೋಜನವಿಲ್ಲ. ವ್ಯಕ್ತಿಯು ಶರಣನಾಗಬೇಕಾದರೆ, ಅವನ ನಡೆನುಡಿಗಳು ಒಳ್ಳೆಯ ರೀತಿಯಲ್ಲಿರಬೇಕು.



೧೫) **ಕೆಲಕ್ಕೆ ಶುದ್ಧನಾದೆನಲ್ಲದೆ**
**ಎನ್ನ ಮನಕ್ಕೆ ಶುದ್ಧನಾಗೆನೇಕಯ್ಯಾ. (೨೮೪-೩೨)**

ಕೆಲ=ಪಕ್ಕ/ಬದಿ/ಮಗ್ಗಲು/ನೆರೆ/ಸಮೀಪ; ಶುದ್ಧನ್+ಆದೆನ್+ಅಲ್ಲದೆ; ಶುದ್ಧ=ಚೊಕ್ಕಟ/ಶುಚಿ/ಕೊಳಕಿಲ್ಲದಿರುವುದು; ಶುದ್ಧನ್=ಒಳ್ಳೆಯ ನಡೆನುಡಿಯುಳ್ಳವನು; ಆದೆನ್=ಆಗಿರುವೆನು;

ಕೆಲಕ್ಕೆ ಶುದ್ಧನಾದೆನ್=ಬಹಿರಂಗದಲ್ಲಿ ನೋಡುವವರ ಕಣ್ಣಿಗೆ ಒಳ್ಳೆಯ ನಡೆನುಡಿಯುಳ್ಳವನಂತೆ ಕಾಣಿಸಿಕೊಳ್ಳುತ್ತೇನೆ;

ಅಲ್ಲದೆ=ಅದನ್ನು ಹೊರತುಪಡಿಸಿ/ಅದನ್ನು ಬಿಟ್ಟು; ಎನ್ನ=ನನ್ನ; ಮನ=ಮನಸ್ಸು/ಚಿತ್ತ; ಶುದ್ಧನ್+ಆಗೆನ್+ಏಕೆ+ಅಯ್ಯಾ; ಆಗೆನು=ಆಗಿರುವುದಿಲ್ಲ; ಏಕೆ=ಇದಕ್ಕೆ ಕಾರಣವೇನು;

ಎನ್ನ ಮನಕ್ಕೆ ಶುದ್ಧನಾಗೆನ್=ನನ್ನ ಅಂತರಂಗದ ಮನದಲ್ಲಿ ನೂರೆಂಟು ಬಗೆಯ ಕೆಟ್ಟ ಒಳಮಿಡಿತಗಳು ಸದಾಕಾಲ ತುಡಿಯುತ್ತಿರುತ್ತವೆ.

ವ್ಯಕ್ತಿಯು ತನ್ನ ನಡೆನುಡಿಯಲ್ಲಿನ ತಪ್ಪುಒಪ್ಪುಗಳನ್ನು ತಾನೇ ಒರೆಹಚ್ಚಿ ನೋಡಿಕೊಳ್ಳುವಾಗ, ಈ ಬಗೆಯ ತಾಕಲಾಟಗಳಿಗೆ ಒಳಗಾಗುತ್ತಾನೆ. ಹೊರಗಿನ ತನ್ನ ನಡೆನುಡಿಗಳಿಗೂ ಒಳಗಿನ ತನ್ನ ಮನದ ಒಳಮಿಡಿತಗಳಿಗೂ ಇರುವ ಅಂತರವನ್ನು ಕಂಡು ಚಿಂತಿತನಾಗಿ, ತನ್ನನ್ನು ತಾನು ಸರಿಪಡಿಸಿಕೊಂಡು ಬಾಳಲು ಪ್ರಯತ್ನಿಸುವ ಹಂತದಲ್ಲಿ ಈ ಬಗೆಯ ಆಲೋಚನೆಗಳು ಮನದಲ್ಲಿ ಮೂಡುತ್ತವೆ.



೧೬) ಕೋಣನ ಹೇರಿಂಗೆ
ಕುನ್ನಿ ಬಸುಕುತ್ತಬಡುವಂತೆ
ತಾವೂ ನಂಬರು
ನಂಬುವರನೂ ನಂಬಲೀಯರು
ತಾವೂ ಮಾಡರು ಮಾಡುವರನೂ ಮಾಡಲೀಯರು.(೬೬೪-೬೧)

ಕೋಣ=ಗಂಡು ಎಮ್ಮೆ; ಹೇರು=ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸಬೇಕಾದ ವಸ್ತುಗಳಿಂದ ತುಂಬಿರುವ ಗಾಡಿ/ಬಂಡಿ; ಹೇರಿಂಗೆ=ಹೇರಿಗೆ/ಗಾಡಿಗೆ/ಬಂಡಿಗೆ;

ಕೋಣನ ಹೇರು=ಕೋಣಗಳನ್ನು ಕಟ್ಟಿರುವ ಬಂಡಿ/ಗಾಡಿ; ಕುನ್ನಿ=ನಾಯಿ; ಬಸುಕುತ್ತ+ಪಡು+ಅಂತೆ; ಬಸುಕುತ್ತ=ನಾಲಗೆಯನ್ನು ಹೊರಚಾಚಿ ಜೊಲ್ಲನ್ನು ಸುರಿಸುತ್ತ, ಬಿಡುತ್ತಿರುವ ಉಸಿರನ ಲಯಕ್ಕೆ ತಕ್ಕಂತೆ ದನಿಯನ್ನು ಹೊರಡಿಸುತ್ತ; ಪಡು=ಹೊಂದು; ಅಂತೆ=ಹಾಗೆ/ಆ ರೀತಿ/ಆ ಬಗೆ;

ಕೋಣನ ಹೇರಿಂಗೆ ಕುನ್ನಿ ಬಸುಕುತ್ತಬಡುವಂತೆ=ತುಂಬಿದ ಬಂಡಿಯನ್ನು ಕೋಣಗಳು ಶ್ರಮದಿಂದ ಎಳೆದುಕೊಂಡು ಮುಂದೆ ಮುಂದೆ ಸಾಗುತ್ತಿರುವಾಗ, ಬಂಡಿಯ ಎರಡು ಚಕ್ರಗಳ ನಡುವಣ ಜಾಗದಲ್ಲಿ ನಡೆದುಬರುತ್ತಿರುವ ನಾಯಿಯು ಬಂಡಿಯನ್ನು ತಾನೇ ಎಳೆಯುತ್ತಿದೆಯೇನೋ ಎನ್ನುವಂತೆ ಏದುಸಿರನ್ನು ಬಿಡುತ್ತಿರುತ್ತದೆ;

ತಾವೂ=ವ್ಯಕ್ತಿಗಳು; ನಂಬು=ನೆಚ್ಚು/ನೆಮ್ಮು/ವಿಶ್ವಾಸವಿಡು; ನಂಬರು=ನಂಬುವುದಿಲ್ಲ; ನಂಬುವರನೂ=ನಂಬುವವರನ್ನೂ/ವಿಶ್ವಾಸವಿಟ್ಟಿರುವವರನ್ನು; ನಂಬಲ್+ಈಯರು; ನಂಬಲ್=ನಂಬಿಕೆಯಿಟ್ಟುಕೊಂಡು ಬಾಳಲು; ಈ=ಕೊಡು/ಅವಕಾಶವನ್ನು ನೀಡು; ಈಯರು=ಕೊಡುವುದಿಲ್ಲ/ಬಿಡುವುದಿಲ್ಲ;

ತಾವೂ ನಂಬರು ನಂಬುವರನೂ ನಂಬಲೀಯರು=ತಾವು ನಂಬುವುದಿಲ್ಲ, ನಂಬಿದವರನ್ನು ಅವರ ನಂಬಿಕೆಯಂತೆ ಬಾಳಲು ಬಿಡದೆ, ಅಡ್ಡಗಾಲು ಹಾಕುತ್ತಾರೆ;

ಮಾಡು=ಕೆಲಸದಲ್ಲಿ ತೊಡಗು/ನಿರ್ವಹಿಸು/ನಡೆಸು; ಮಾಡರು=ಮಾಡುವುದಿಲ್ಲ ; ಮಾಡುವರನೂ=ಮಾಡುವವರನ್ನೂ; ಮಾಡಲ್+ಈಯರು; ಮಾಡಲ್=ಕೆಲಸದಲ್ಲಿ ತೊಡಗಲು/ಕೆಲಸವನ್ನು ಮಾಡಿ ಮುಗಿಸಲು;

ತಾವೂ ಮಾಡರು ಮಾಡುವರನೂ ಮಾಡಲೀಯರು=ತಾವು ಒಳ್ಳೆಯ ಕೆಲಸಗಳನ್ನು ಮಾಡುವುದಿಲ್ಲ. ಒಳ್ಳೆಯ ಕೆಲಸದಲ್ಲಿ ತೊಡಗಲು ಹೊರಟವರಿಗೆ ಅಡೆತಡೆಗಳನ್ನು ಒಡ್ಡುತ್ತಾರೆ;

ಕುಟುಂಬದ ನೆಲೆ/ದುಡಿಮೆಯ ನೆಲೆ/ಸಾರ್ವಜನಿಕ ನೆಲೆಗಳಲ್ಲಿ ವ್ಯಕ್ತಿಯು ಒಳ್ಳೆಯ ಕೆಲಸವನ್ನು ಮಾಡುತ್ತಿದ್ದಾಗ, ಅದನ್ನು ಕಂಡು ಕರುಬಿ, ಆ ಕೆಲಸವನ್ನು ನಡೆಯದಂತೆ ತಡೆಯಲು/ಕೆಲಸ ಮಾಡುವ ವ್ಯಕ್ತಿಯ ಕಸುವನ್ನು ಕುಗ್ಗಿಸಲು ಕೆಲವರು ಪ್ರಯತ್ನಿಸುತ್ತಾರೆ. ಇಂತಹವರು ತಾವಾಗಿಯೇ ಒಳ್ಳೆಯ ಕೆಲಸವನ್ನು ಮಾಡಲು ಮುಂದೆ ಬರುವುದಿಲ್ಲ; ಮಾಡುವವರನ್ನು ಮಾಡಲು ಬಿಡುವುದಿಲ್ಲ. ಇಂತಹ ವ್ಯಕ್ತಿಗಳ ನೀಚತನದ ನಡೆನುಡಿಯನ್ನು ಕುರಿತು ಕೋಣನ ಬಂಡಿಯ ನೆರಳಿನಲ್ಲಿ ಸಾಗುತ್ತಿರುವ ನಾಯಿಯ ರೂಪಕದ ಮೂಲಕ ಹೇಳಲಾಗಿದೆ.



೧೭) ಛಲಬೇಕು ಶರಣಂಗೆ
ಪರಧನವನೊಲ್ಲೆನೆಂಬ

ಛಲಬೇಕು ಶರಣಂಗೆ
ಪರಸತಿಯನೊಲ್ಲೆನೆಂಬ. (೬೭೭-೬೨)

ಛಲ=ಚಲ/ಗಟ್ಟಿ ಮನಸ್ಸು/ಕಯ್ಗೊಂಡ ಕೆಲಸವನ್ನು ಮಾಡಿ ಮುಗಿಸುತ್ತೇನೆ ಎಂಬ ನಂಬಿಕೆಯನ್ನು ತನ್ನಲ್ಲಿ ತಾನು ಹೊಂದಿರುವುದು; ಬೇಕು=ಅಗತ್ಯ/ಅವಶ್ಯಕ; ಶರಣ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು/ಶಿವನನ್ನು ಒಲಿದವನು/ಶಿವನನ್ನು ಪೂಜಿಸುವವನು; ಶರಣಂಗೆ=ಶರಣನಿಗೆ;

ಪರ+ಧನ+ಅನ್+ಒಲ್ಲೆನ್+ಎಂಬ; ಪರ=ಇತರ/ಬೇರೆಯ/ಅನ್ಯ; ಧನ=ಹಣ/ಸಂಪತ್ತು/ಒಡವೆ ವಸ್ತು/ಆಸ್ತಿಪಾಸ್ತಿ; ಪರಧನ=ಬೇರೆಯವರ ಸಂಪತ್ತು; ಅನ್=ಅನ್ನು; ಒಲ್=ಬಯಸು/ಇಚ್ಚಿಸು; ಒಲ್ಲೆನ್=ನಾನು ಬಯಸುವುದಿಲ್ಲ/ನನಗೆ ಬೇಕಾಗಿಲ್ಲ; ಎಂಬ=ಎನ್ನುವ; ಪರ+ಸತಿ+ಅನ್+ಒಲ್ಲೆನ್+ಎಂಬ; ಸತಿ=ಹೆಂಡತಿ/ಮಡದಿ/ಹೆಂಗಸು/ಹೆಣ್ಣು; ಪರಸತಿ=ಬೇರೆಯವನ ಮಡದಿ/ಹೆಂಡತಿ;

ಶಿವಶರಣನಾದವನು ಸಮಾಜ ಒಪ್ಪಿತವಲ್ಲದ ಕಾಮದ ನಂಟನ್ನು ಹೊಂದಬಾರದು ಮತ್ತು ಇತರರ ಸಂಪತ್ತನ್ನು ಕಪಟತನದಿಂದ/ದಬ್ಬಾಳಿಕೆಯಿಂದ ದೋಚಬಾರದು ಎಂಬ ಕಟ್ಟಲೆಯನ್ನು ತನಗೆ ತಾನೇ ಹಾಕಿಕೊಂಡು ಬಾಳಬೇಕು.



೧೮)	ಜ್ಞಾನದ ಬಲದಿಂದ
ಅಜ್ಞಾನದ ಕೇಡು ನೋಡಯ್ಯಾ

ಜ್ಯೋತಿಯ ಬಲದಿಂದ
ತಮಂಧದ ಕೇಡು ನೋಡಯ್ಯಾ. (೮೪೨-೭೫)

ಜ್ಞಾನ=ತಿಳುವಳಿಕೆ/ಅರಿವು; ಬಲ+ಇಂದ; ಬಲ=ಶಕ್ತಿ/ಕಸುವು/ಮಹಿಮೆ/ಹಿರಿಮೆ/ವರ್ಚಸ್ಸು; ಅಜ್ಞಾನ=ಅರಿವಿಲ್ಲದಿರುವಿಕೆ/ತಿಳುವಳಿಕೆಯಿಲ್ಲದಿರುವುದು; ಕೇಡು=ನಾಶ/ಅಳಿವು/ಹಾನಿ/ಇಲ್ಲವಾಗುವುದು; ನೋಡು+ಅಯ್ಯಾ; ನೋಡು=ಕಾಣು/ತಿಳಿ;

ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ=ಒಳ್ಳೆಯ ಅರಿವನ್ನು ಪಡೆಯುತ್ತಿದ್ದಂತೆಯೇ ಮನದಲ್ಲಿ ನೆಲೆಮಾಡಿದ್ದ ತಪ್ಪು ತಿಳುವಳಿಕೆಯು ಇಲ್ಲವಾಗುತ್ತದೆ;

ಜ್ಯೋತಿ=ಬೆಳಗುತ್ತಿರುವ ದೀಪದಿಂದ ಹೊರಹೊಮ್ಮುತ್ತಿರುವ ಕಾಂತಿ/ಬೆಳಕು; ತಮಂಧ=ಕತ್ತಲೆ;

ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯಾ=ಬೆಳಕು ಹರಡುತ್ತಿದ್ದಂತೆಯೇ ಕವಿದಿದ್ದ ಕತ್ತಲೆಯು ಇಲ್ಲವಾಗುತ್ತದೆ;

ಒಳ್ಳೆಯ ತಿಳುವಳಿಕೆಯ ನಡೆನುಡಿಗಳಿಗೆ ಜ್ಯೋತಿಯನ್ನು ಮತ್ತು ತಿಳಿಗೇಡಿತನದ ನಡೆನುಡಿಗಳಿಗೆ ತಮಂಧವನ್ನು ರೂಪಕವಾಗಿ ಬಳಸುತ್ತಾರೆ;



೧೯) ತನ್ನ ವಿಚಾರಿಸಲೊಲ್ಲದು
ಇದಿರ ವಿಚಾರಿಸಹೋಹುದೀ ಮನವು

ಏನ ಮಾಡುವೆನೀ ಮನವನು
ಎಂತು ಮಾಡುವೆನೀ ಮನವನು. (೩೮–೧೪)

ತನ್ನ=ತನ್ನನ್ನು; ವಿಚಾರಿಸಲ್+ಒಲ್ಲದು; ವಿಚಾರಿಸು=ಕೇಳು/ಪ್ರಶ್ನಿಸು/ಯಾವುದೇ ಸಂಗತಿಯ ಸರಿ ತಪ್ಪುಗಳನ್ನು ಒರೆಹಚ್ಚಿ ನೋಡುವುದು/ಕಾರ್ಯ ಕಾರಣಗಳ ಹಿನ್ನೆಲೆಯಲ್ಲಿ ಯಾವುದೇ ಒಂದು ಸಂಗತಿಯ ವಿವರವನ್ನು ತಿಳಿಯುವುದು; ಒಲ್=ಬಯಸು/ಇಚ್ಚಿಸು; ಒಲ್ಲದು=ಬಯಸದು/ಇಚ್ಚಿಸದು;

ತನ್ನ ವಿಚಾರಿಸಲೊಲ್ಲದು=ವ್ಯಕ್ತಿಯಾಗಿ ತನ್ನ ನಡೆನುಡಿಯಲ್ಲಿರುವ ಕುಂದು ಕೊರತೆಗಳೇನು/ಇತಿಮಿತಿಗಳೇನು/ಸರಿ ತಪ್ಪುಗಳು ಯಾವುವು ಎಂಬುದನ್ನು ತಾನೇ ಒರೆಹಚ್ಚಿ ನೋಡಿ ತಿಳಿಯಲು ಬಯಸುವುದಿಲ್ಲ. ಅಂದರೆ ವ್ಯಕ್ತಿಯು ತನ್ನ ನಡೆನುಡಿಯಲ್ಲಿನ ತಪ್ಪುಗಳ ಬಗ್ಗೆ ತಲೆಕೆಡಿಸಿಕೊಳ್ಳುವುದಿಲ್ಲ;

ಇದಿರ=ಬೇರೆಯವರನ್ನು/ಅನ್ಯರನ್ನು/ಇತರರನ್ನು; ವಿಚಾರಿಸ+ಹೋಹುದು+ಈ; ವಿಚಾರಿಸ=ವಿಚಾರಿಸಲು/ಕೇಳಲು/ಪ್ರಶ್ನಿಸಲು/ಸರಿ ತಪ್ಪುಗಳನ್ನು ಒರೆಹಚ್ಚಿ ನೋಡಲು; ಹೋಹುದು=ಹೋಗುವುದು; ಈ ಮನವು=ನನ್ನ ಮನಸ್ಸು; ಏನ=ಏನನ್ನು; ಮಾಡುವೆನ್+ ಈ; ಎಂತು=ಯಾವ ರೀತಿಯಲ್ಲಿ/ಯಾವ ಬಗೆಯಲ್ಲಿ;

ಏನ ಮಾಡುವೆನೀ ಮನವನು ಎಂತು ಮಾಡುವೆನೀ ಮನವನು=ಯಾವಾಗಲೂ ಬೇರೆಯವರ ನಡೆನುಡಿಯಲ್ಲಿನ ತಪ್ಪುಗಳನ್ನು ಕೆದಕಿ, ಅವರನ್ನು ಹೀಯಾಳಿಸಲು/ ಕಡೆಗಣಿಸಲು/ಅಪಮಾನಿಸಲು ಹಾತೊರೆಯುವ ಈ ನನ್ನ ಮನಸ್ಸನ್ನು ಯಾವ ಬಗೆಯಲ್ಲಿ ಹತೋಟಿಯಲ್ಲಿಟ್ಟುಕೊಳ್ಳಲಿ/ಹೇಗೆ ತಾನೆ ಇಂತಹ ಕೆಟ್ಟ ರೀತಿಯಲ್ಲಿ ವರ್ತಿಸುತ್ತಿರುವ ನನ್ನ ಮನಸ್ಸನ್ನು ಸರಿಮಾಡಿಕೊಳ್ಳಲಿ;

ಎಲ್ಲ ವ್ಯಕ್ತಿಗಳಲ್ಲೂ ಈ ಬಗೆಯ ಮಾನಸಿಕ ರೋಗವಿದೆ. ರೋಗದ ಪ್ರಮಾಣದಲ್ಲಿ ಹೆಚ್ಚು ಕಡಿಮೆಯ ಅಂತರವಿದೆ. ಇಂತಹ ರೋಗದಿಂದ ವ್ಯಕ್ತಿಯು ತಾನು ಪಾರಾಗಬೇಕೆಂಬ ಅರಿವನ್ನು ಮೊದಲು ಪಡೆಯಬೇಕು ಮತ್ತು ಅನಂತರ ತನ್ನ ನಡೆನುಡಿಗಳಲ್ಲಿ ಎಚ್ಚರ ತಪ್ಪದಂತೆ ಬಾಳುವುದನ್ನು ಕಲಿಯಬೇಕು ಎಂಬ ಸಂಗತಿಯನ್ನು ಈ ನುಡಿಗಳು ಸೂಚಿಸುತ್ತಿವೆ.



## ೨೦) ದಿಟವ ನುಡಿವುದು
## ನುಡಿದಂತೆ ನಡೆವುದು. (೨೩೭-೨೮)

ದಿಟ=ನಿಜ/ಸತ್ಯ/ವಾಸ್ತವ;

ನುಡಿ=ಹೇಳು/ಮಾತನಾಡು; ದಿಟವ ನುಡಿವುದು=ನಿಜವನ್ನಾಡುವುದು/ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನುಂಟು ಮಾಡುವಂತಹ ಒಳ್ಳೆಯ ನುಡಿಗಳನ್ನಾಡುವುದು;

ನುಡಿದ+ಅಂತೆ; ಅಂತೆ=ಹಾಗೆ/ಅದೇ ರೀತಿಯಲ್ಲಿ/ಬಗೆಯಲ್ಲಿ; ನುಡಿದಂತೆ=ಮಾತನಾಡಿದಂತೆ;

ನಡೆ=ನಡವಳಿಕೆ/ಕೆಲಸವನ್ನು ಮಾಡುವುದು/ವರ್ತನೆ;

ನುಡಿದಂತೆ ನಡೆವುದು= ಒಳ್ಳೆಯದನ್ನು ಬಾಯಲ್ಲಿ ಹೇಳಿದಂತೆ ವ್ಯಕ್ತಿಯು ತನ್ನ ನಿಜ ಜೀವನದ ವ್ಯವಹಾರಗಳಲ್ಲಿ ಒಳ್ಳೆಯ ಕೆಲಸಗಳನ್ನು ಮಾಡುವುದು.



೨೧) ಧೃತಿಗೆಟ್ಟು ಅನ್ಯರ ಬೇಡದಂತೆ
ಮತಿಗೆಟ್ಟು ಪರರುವ ಹೊಗಳದಂತೆ

ಪರಸತಿಯರ ರತಿಗೆ ಮನ ಹಾರದಂತೆ
ಎನ್ನ ಪ್ರತಿಪಾಲಿಸು ಕೂಡಲಸಂಗಮದೇವಾ. (೨೬೩-೩೦)

ಧೃತಿ+ಕೆಟ್ಟು; ಧೃತಿ=ದಿಟ್ಟತನ/ಕೆಚ್ಚು; ಕೆಡು=ಅಳಿ/ನಾಶವಾಗು/ಇಲ್ಲವಾಗು/ಕಳೆದುಹೋಗು; ಕೆಟ್ಟು=ಅಳಿದು/ನಾಶವಾಗಿ/ಇಲ್ಲವಾಗಿ; ಅನ್ಯರ=ಬೇರೆಯವರನ್ನು/ಇತರರನ್ನು; ಬೇಡದ+ಅಂತೆ; ಬೇಡು=ಯಾಚಿಸು/ದೀನನಾಗಿ ಕೇಳು; ಅಂತೆ=ಹಾಗೆ/ಆ ರೀತಿ;

ಧೃತಿಗೆಟ್ಟು ಅನ್ಯರ ಬೇಡದಂತೆ=ಜೀವನದಲ್ಲಿ ಬರುವ ಎಡರು ತೊಡರುಗಳಿಂದಾಗಿ ಮಾನಸಿಕವಾಗಿ ಕುಗ್ಗಿ ಕುಸಿದು, ದೀನತೆಯಿಂದ ಇತರರ ಮುಂದೆ ಕಯ್ಯೊಡ್ಡಿ ಬಾಳದಂತೆ;

ಮತಿ+ಕೆಟ್ಟು; ಮತಿ=ತಿಳಿವು/ಅರಿವು; ಮತಿಗೆಟ್ಟು=ಸರಿ/ತಪ್ಪುಗಳನ್ನು, ಒಳಿತು/ಕೆಡುಕುಗಳನ್ನು ಒರೆಹಚ್ಚಿ ನೋಡುವ ಮಾನಸಿಕ ಕಸುವು/ಶಕ್ತಿ ಕಳೆದುಹೋಗಿ; ಪರ=ಅನ್ಯ/ಬೇರೆ/ಇತರ; ಪರರುವ=ಇತರರನ್ನು; ಹೊಗಳದ+ಅಂತೆ; ಹೊಗಳು=ಕೊಂಡಾಡು/ಬಣ್ಣಿಸು/ಗುಣಗಾನ ಮಾಡು/ಯಾವುದೇ ವಸ್ತು-ಜೀವಿ-ವ್ಯಕ್ತಿಯ ಬಗ್ಗೆ ಮಾತನಾಡುವಾಗ, ಅದರಲ್ಲಿ/ಅವರಲ್ಲಿ ಕಂಡುಬರುವ ವಾಸ್ತವ ಸಂಗತಿಗಳ ಜತೆಗೆ ಇಲ್ಲಸಲ್ಲದ ಸಂಗತಿಗಳನ್ನು ಸೇರಿಸಿಕೊಂಡು ಮಾತನಾಡುವುದು;

ಮತಿಗೆಟ್ಟು ಪರರುವ ಹೊಗಳದಂತೆ=ವ್ಯಕ್ತಿಯು ತನ್ನ ಅಗತ್ಯವನ್ನು/ಆಸೆಯನ್ನು ಈಡೇರಿಸಿಕೊಳ್ಳುವ ಉದ್ದೇಶದಿಂದ ಇತರರನ್ನು ಕೊಂಡಾಡುತ್ತ, ತನ್ನ ವಿವೇಕವನ್ನು ಮತ್ತು ವ್ಯಕ್ತಿತ್ವವನ್ನು ಕಳೆದುಕೊಂಡು ಬಾಳದಂತೆ;

ಸತಿ=ಹೆಂಡತಿ/ಮಡದಿ/ಹೆಣ್ಣು; ಪರಸತಿ=ಮತ್ತೊಬ್ಬನ ಮಡದಿ/ಬೇರೆಯವನ ಹೆಂಡತಿ; ರತಿ=ಹೆಣ್ಣು ಗಂಡು ಪರಸ್ಪರ ಕಾಮದ ನಂಟನ್ನು ಹೊಂದುವುದು; ಹಾರದ+ಅಂತೆ; ಹಾರು=ಬಯಸು/ಹಂಬಲಿಸು/ಇಚ್ಚಿಸು;

ಪರಸತಿಯರ ರತಿಗೆ ಮನಹಾರದಂತೆ=ಬೇರೆಯವರ ಹೆಂಡತಿಯರೊಡನೆ ಕಾಮದ ನಂಟನ್ನು ಪಡೆಯಬೇಕೆಂಬ ಹಂಬಲಕ್ಕೆ ಒಳಗಾಗದಂತೆ/ಮಾನಸಿಕ ತುಡಿತಕ್ಕೆ ಬಲಿಯಾಗದಂತೆ;

ಎನ್ನ=ನನ್ನನ್ನು; ಪ್ರತಿಪಾಲಿಸು=ಕಾಪಾಡು/ನಡೆಸು; ಕೂಡಲಸಂಗಮದೇವ= ಬಸವಣ್ಣನ ಮೆಚ್ಚಿನ ದೇವರು;

ಒಳಿತು ಕೆಡುಕಿನ ಒಳಮಿಡಿತಗಳಿಂದ ತುಡಿಯುವ ಮನಸ್ಸಿನ ತುಯ್ದಾಟವನ್ನು ನಿಯಂತ್ರಿಸಿಕೊಂಡು, ಒಳ್ಳೆಯ ನಡೆನುಡಿಗಳಿಂದ ಬಾಳಲು ಬೇಕಾದ ಅರಿವು ಮತ್ತು ಎಚ್ಚರವನ್ನು ಹೊಂದುವುದಕ್ಕಾಗಿ ವ್ಯಕ್ತಿಯು ದೇವರಲ್ಲಿ ಮೊರೆಯಿಡುತ್ತಿದ್ದಾನೆ.



೨೨) **ನಡೆಯಲರಿಯದೆ**
**ನುಡಿಯಲರಿಯದೆ**
**ಲಿಂಗವ ಪೂಜಿಸಿ ಫಲವೇನು. (೪೦೯-೪೧)**

ನಡೆ+ಅಲ್+ಅರಿಯದೆ; ನಡೆ=ನಡವಳಿಕೆ/ವರ್ತನೆ/ಮಾಡುವ ಕೆಲಸ; ಅರಿ=ತಿಳಿ/ಕಲಿ; ಅರಿಯದೆ=ತಿಳಿಯದೆ/ಕಲಿಯದೆ;

ನಡೆಯಲರಿಯದೆ=ನಿತ್ಯಜೀವನದಲ್ಲಿ ತನ್ನ ಒಳಿತಿಗಾಗಿ ದುಡಿಯುವಂತೆಯೇ ಸಹಮಾನವರ ಮತ್ತು ಸಮಾಜದ ಹಿತಕ್ಕಾಗಿ ಬಾಳಬೇಕೆಂಬುದನ್ನು ತಿಳಿಯದೆ/ಅರಿತುಕೊಳ್ಳದೆ;

ನುಡಿ+ಅಲ್+ಅರಿಯದೆ; ನುಡಿ=ಮಾತು/ಸೊಲ್ಲು;

ನುಡಿಯಲರಿಯದೆ= ಇತರರೊಡನೆ ಮಾತನಾಡುವಾಗ ಅವರೊಡನೆ ಹೇಗೆ ಮಾತನಾಡಬೇಕೆಂಬುದನ್ನು ತಿಳಿಯದೆ/ಇತರರೊಡನೆ ತಾನಾಡುವ ಮಾತುಗಳು ಅವರ ಮನಸ್ಸಿಗೆ ಅರಿವು ಮತ್ತು ಆನಂದವನ್ನು ನೀಡುವಂತಿರಬೇಕೆ ಹೊರತು, ಅವರ ಮನಸ್ಸನ್ನು ಗಾಸಿಗೊಳಿಸುವಂತಿರಬಾರದು ಎಂಬ ಎಚ್ಚರವನ್ನು ಹೊಂದಿರದೆ;

ಲಿಂಗ=ಈಶ್ವರನ ಸಂಕೇತವಾದ ವಿಗ್ರಹ/ಮೂರ್ತಿ; ಪೂಜಿಸು=ದೂಪ ದೀಪಗಳ ಆರತಿಯಿಂದ/ಹೂಹಣ್ಣುಗಳ ಅರ್ಪಣೆಯಿಂದ ದೇವರ ಸೇವೆಯನ್ನು ಮಾಡುವುದು; ಫಲ+ಏನು; ಫಲ=ಪ್ರಯೋಜನ/ಪರಿಣಾಮ; ಏನು=ಯಾವುದು;

ಸಹಮಾನವರೊಡನೆ ಒಲವು ನಲಿವು ನೆಮ್ಮದಿಯಿಂದ ಜತೆಗೂಡಿ ಬಾಳುವ ಒಳ್ಳೆಯ ನಡೆನುಡಿಗಳನ್ನು ಅರಿಯದೆ ಮಾಡುವ ದೇವರ ಪೂಜೆಯಿಂದ ಯಾವ ಪ್ರಯೋಜನವೂ ಇಲ್ಲ. ದೇವರ ಪೂಜೆಯನ್ನು ಮಾಡುವ ವ್ಯಕ್ತಿಯು ಸಾಮಾಜಿಕವಾಗಿ ಒಳ್ಳೆಯ ವ್ಯಕ್ತಿತ್ವವನ್ನು ಹೊಂದಿರಬೇಕೆಂಬ ಸಂಗತಿಯನ್ನು ಈ ನುಡಿಗಳು ಸೂಚಿಸುತ್ತಿವೆ.



## ೨೩) ನುಡಿದಂತೆ ನಡೆಯದಿದ್ದಡೆ
## ಕೂಡಲಸಂಗಯ್ಯ ಮೆಚ್ಚ ಕಾಣಿರಯ್ಯಾ. (೪೧೮-೪೧)

ನುಡಿದ+ಅಂತೆ; ನುಡಿ=ಮಾತು/ಸೊಲ್ಲು; ಅಂತೆ=ಹಾಗೆ/ಆ ರೀತಿ; ನಡೆಯದೆ+ಇದ್ದಡೆ; ನಡೆ=ನಡವಳಿಕೆ/ವರ್ತನೆ/ಮಾಡುವ ಕೆಲಸ; ಇದ್ದಡೆ=ಇದ್ದರೆ;

ನುಡಿದಂತೆ ನಡೆಯದಿದ್ದಡೆ=ವ್ಯಕ್ತಿಯು ತಾನು ಆಡುವ ಒಳ್ಳೆಯ ಮಾತುಗಳಿಗೆ ತಕ್ಕಂತೆ ನಿತ್ಯಜೀವನದ ವ್ಯವಹಾರದಲ್ಲಿ ಒಳ್ಳೆಯ ಕೆಲಸಗಳನ್ನು ಮಾಡದಿದ್ದರೆ/ಹೇಳುವುದು ಒಂದು ಮಾಡುವುದು ಮತ್ತೊಂದಾದರೆ;

ಕೂಡಲಸಂಗಯ್ಯ=ಬಸವಣ್ಣನ ಮೆಚ್ಚಿನ ದೇವರು; ಮೆಚ್ಚು=ಒಪ್ಪು/ಒಲಿ; ಮೆಚ್ಚ=ಒಪ್ಪುವುದಿಲ್ಲ/ಒಲಿಯುವುದಿಲ್ಲ; ಕಾಣಿರಿ+ಅಯ್ಯಾ; ಕಾಣ್=ನೋಡು/ತಿಳಿ; ಕಾಣಿರಿ=ತಿಳಿಯಿರಿ;

ಜೀವನದಲ್ಲಿ ಒಳ್ಳೆಯ ನಡೆನುಡಿಗಳಿಂದ ಬಾಳಿದಾಗ ಮಾತ್ರ ಕೂಡಲಸಂಗಮದೇವನು ಒಲಿಯುತ್ತಾನೆ ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು.



೨೪)	**ಬಂದುದ ಕೈಕೊಳ್ಳಬಲ್ಲಡೆ ನೇಮ**
**ಇದ್ದುದ ವಂಚನೆಯ ಮಾಡದಿದ್ದಡೆ ನೇಮ**

**ನಡೆದು ತಪ್ಪದಿದ್ದಡೆ ಅದು ನೇಮ**
**ನುಡಿದು ಹುಸಿಯದಿದ್ದಡೆ ಅದು ಮುನ್ನವೆ ನೇಮ. (೨೩೧-೨೮)**

ಬಂದುದ=ಬಂದಿರುವುದನ್ನು/ವ್ಯಕ್ತಿಯ ಪಾಲಿಗೆ ಬಂದ ಕೆಲಸದ ಹೊಣೆಗಾರಿಕೆಯನ್ನು; ಕೈಕೊಳ್ಳ+ಬಲ್ಲಡೆ; ಕೈಕೊಳ್ಳು=ಸ್ವೀಕರಿಸು/ಒಪ್ಪಿಕೊಳ್ಳುವುದು; ಬಲ್=ಕಸುವು/ಶಕ್ತಿ; ಬಲ್ಲಡೆ=ಶಕ್ತಿಯನ್ನು/ಕಸುವನ್ನು ಹೊಂದಿದ್ದರೆ; ಕೈಕೊಳ್ಳಬಲ್ಲಡೆ=ಕೆಲಸವನ್ನು ಒಪ್ಪಿಕೊಂಡು ಚೆನ್ನಾಗಿ ಮಾಡಬಲ್ಲ ಕಸುವನ್ನು ಹೊಂದಿದ್ದರೆ;

ನೇಮ=ವ್ರತ/ನೋಂಪಿ/ದೇವರನ್ನು ಒಲಿಸಿಕೊಳ್ಳಲು/ದೇವರ ಕರುಣೆಗೆ ಪಾತ್ರರಾಗಲು ಮಾಡುವ ಜಪ/ತಪ/ಪೂಜೆ/ಉಪವಾಸ/ಜಾಗರಣೆ ಮುಂತಾದ ನಿಯತವಾದ ಆಚರಣೆ. ನಿಯತವಾದ ಆಚರಣೆಯಲ್ಲಿ ತೊಡಗಿದಾಗ ವ್ಯಕ್ತಿಯು ಹೀಗೆಯೆ ಇರಬೇಕು/ಮಾಡಬೇಕು/ನಡೆದುಕೊಳ್ಳಬೇಕು ಎಂಬ ಕಟ್ಟಲೆ/ನಿಯಮವಿರುತ್ತದೆ;

ಬಂದುದ ಕೈಕೊಳ್ಳಬಲ್ಲಡೆ ನೇಮ=ವ್ಯಕ್ತಿಯ ತನ್ನ ಪಾಲಿನ ಕೆಲಸವನ್ನು ಒಲವು ನಲಿವು ಮತ್ತು ಪ್ರಾಮಾಣಿಕತನದಿಂದ ಮಾಡಿದರೆ, ಅದು ದೇವರ ಪೂಜೆಗೆ ಸಮನಾಗುತ್ತದೆ;

ಇದ್ದುದ=ಇರುವುದನ್ನು; ವಂಚನೆ=ಮೋಸ/ದ್ರೋಹ; ಮಾಡದೆ+ಇದ್ದಡೆ; ಇದ್ದಡೆ=ಇದ್ದರೆ;

ಇದ್ದುದ ವಂಚನೆ ಮಾಡದಿದ್ದಡೆ ನೇಮ=ಜನಸಮುದಾಯವೆಲ್ಲವೂ ಹಂಚಿಕೊಂಡು ಪಡೆಯಬೇಕಾಗಿರುವ ಅನ್ನ ಬಟ್ಟೆ ವಸತಿ ವಿದ್ಯೆ ಉದ್ಯೋಗವನ್ನು ಕಪಟತನದಿಂದ/ಕ್ರೂರತನದಿಂದ/ದಬ್ಬಾಳಿಕೆಯಿಂದ ಲಪಟಾಯಿಸದೆ, ಸಹಮಾನವರೆಲ್ಲರಿಗೂ ದೊರೆಯುವಂತೆ ನಡೆದುಕೊಂಡರೆ ಅದು ನೇಮವಾಗುತ್ತದೆ;

ನಡೆದು=ದುಡಿಮೆಯ ನೆಲೆಯಲ್ಲಿ ಕೆಲಸವನ್ನು ಮಾಡುವಾಗ; ತಪ್ಪದೆ+ಇದ್ದಡೆ; ತಪ್ಪು=ಸರಿಯಾಗಿರುವ ರೀತಿಯಲ್ಲಿ ಮಾಡದೆ ಕ್ರಮತಪ್ಪಿ ನಡೆಯುವುದು/ಹದಗೆಡುವುದು/ಹಾಳು ಮಾಡುವುದು; ತಪ್ಪದೆ=ತಪ್ಪುಗಳನ್ನು ಮಾಡದೆ/ಕೇಡನ್ನು ಬಗೆಯದೆ;

ನಡೆದು ತಪ್ಪದಿದ್ದಡೆ ಅದು ನೇಮ=ವ್ಯಕ್ತಿಯು ತಾನು ಮಾಡುವ ಕೆಲಸದಲ್ಲಿ ತಪ್ಪುಗಳನ್ನು ಮಾಡದಿದ್ದರೆ, ಅದು ನೇಮವಾಗುತ್ತದೆ;

ನುಡಿ=ಮಾತು/ಸೊಲ್ಲು; ಹುಸಿಯದೆ+ಇದ್ದಡೆ; ಹುಸಿ=ಸುಳ್ಳು/ಸಟೆ/ಇರುವುದನ್ನು ಇಲ್ಲವೆಂದು ಹೇಳುವುದು ಇಲ್ಲದ್ದನ್ನು ಇದೆಯೆಂದು ಹೇಳುವುದು; ಮುನ್ನ=ಮೊದಲು/ಎಲ್ಲಕ್ಕಿಂತ ಮಿಗಿಲಾದುದು;

ನುಡಿದು ಹುಸಿಯದಿದ್ದಡೆ ಅದು ಮುನ್ನವೆ ನೇಮ=ಮಾತನಾಡುವಾಗ ಸುಳ್ಳನ್ನು ಹೇಳದಿದ್ದರೆ, ಅದು ಎಲ್ಲ ಬಗೆಯ ನೇಮಗಳಿಗಿಂತಲೂ ಒಳ್ಳೆಯದು/ಮಿಗಿಲಾದುದು;

ವ್ಯಕ್ತಿಯ ಒಳ್ಳೆಯ ನಡೆನುಡಿಗಳೇ ನೇಮವೆಂಬ/ದೇವರಿಗೆ ಮಾಡುವ ಪೂಜೆ ಎಂಬ ನಿಲುವನ್ನು ಈ ನುಡಿಗಳು ಸೂಚಿಸುತ್ತವೆ.



೨೫) ಬರಿಯ ಮಾತಿನ ಮಾಲೆಯಲೇನಹುದು. (೧೯೧-೨೫)

ಬರಿ=ಏನೂ ಇಲ್ಲದಿರುವುದು; ಮಾತು=ನುಡಿ/ಸೊಲ್ಲು;

ಬರಿಯ ಮಾತು=ನಿಜ ಜೀವನದಲ್ಲಿ ಮಾಡಿ/ಆಚರಿಸಿ ತೋರಿಸದೆ, ಕೇವಲ ಮಾತಿನಲ್ಲಿ ಮಾತ್ರ ಸತ್ಯ/ನೀತಿ/ನ್ಯಾಯ/ಕರುಣೆ/ಪ್ರಾಮಾಣಿಕತನ/ಸಮಾನತೆಯ ವಿಚಾರಗಳನ್ನು ದೊಡ್ಡದಾಗಿ ಆಡುತ್ತಿರುವುದು;

ಮಾಲೆ+ಅಲ್+ಏನ್+ಅಹುದು; ಮಾಲೆ=ಸರ/ಕೊರಳಲ್ಲಿ ಹಾಕಿಕೊಳ್ಳುವ ಹೂವಿನ ಹಾರ/ಮುತ್ತಿನ ಹಾರ/ಸಾಲು/ಪಂಕ್ತಿ;

ಮಾತಿನ ಮಾಲೆ=ದಾರದ ಎಳೆಯೊಂದಕ್ಕೆ ಬಿಡಿಬಿಡಿ ಹೂಗಳನ್ನು/ಮುತ್ತುಗಳನ್ನು ಪೋಣಿಸಿ ಹಾರವನ್ನು ಕಟ್ಟುವಂತೆ ಇಂಪಾದ/ಸೊಗಸಾದ ಪದಗಳನ್ನು ಜೋಡಿಸಿಕೊಂಡು ಕೇಳುಗರ ಮನಸೆಳೆಯುವಂತೆ ಮಾತನಾಡುವ ಕುಶಲತೆ; ಏನು=ಯಾವುದು; ಅಹುದು=ಆಗುತ್ತದೆ;

ವ್ಯಕ್ತಿಯು ತನ್ನ ನಿಜ ಜೀವನದಲ್ಲಿ ಆಚರಿಸಿ ತೋರಿಸಲಾಗದ ಸತ್ಯ/ನೀತಿ/ಸಾಮಾಜಿಕ ನ್ಯಾಯದ ಸಂಗತಿಗಳನ್ನು ಕುರಿತು ದೊಡ್ಡ ದೊಡ್ಡ ಮಾತುಗಳ ಮೂಲಕ ಕೇಳುಗರು ತಲೆದೂಗುವಂತೆ ಆಡುವುದರಿಂದ ಯಾವ ಪ್ರಯೋಜನವೂ ಇಲ್ಲ. ದುಡಿಮೆಯನ್ನು ಮಾಡದೆ ಕೇವಲ ಮಾತಿನಿಂದ ವ್ಯಕ್ತಿಯ/ಸಮುದಾಯದ ಬದುಕಿನಲ್ಲಿ ಒಳ್ಳೆಯದು ಉಂಟಾಗುವುದಿಲ್ಲ.



೨೬) ಬೇವಿನ ಬೀಜವ ಬಿತ್ತಿ
ಬೆಲ್ಲದ ಕಟ್ಟೆಯ ಕಟ್ಟಿ

ಆಕಳ ಹಾಲನೆರೆದು
ಜೇನುತುಪ್ಪವ ಹೊಯ್ದಡೆ

ಸಿಹಿಯಾಗಬಲ್ಲುದೆ
ಕಹಿಯಹುದಲ್ಲದೆ. (೬೨೬-೫೮)

ಬೇವು=ಒಂದು ಬಗೆಯ ಮರ. ಇದರ ಎಲೆ, ಕಾಯಿ, ಹಣ್ಣುಗಳೆಲ್ಲವೂ ಕಹಿಯಾದ ರುಚಿಯನ್ನು ಹೊಂದಿರುತ್ತವೆ; ಬೀಜ=ಕಾಳು/ಬಿತ್ತ; ಬಿತ್ತು=ಬೀಜವನ್ನು ಹಾಕು; ಬಿತ್ತಿ=ಬೀಜವನ್ನು ಮಣ್ಣಿನಲ್ಲಿ ಹೂತು/ನೆಟ್ಟು;

ಬೆಲ್ಲ=ಕಬ್ಬಿನ ಜಲ್ಲೆಯನ್ನು ಗಾಣದಿಂದ ಅರೆದಾಗ ಬರುವ ಕಬ್ಬಿನ ಹಾಲನ್ನು ಕುದಿಸಿ ತಯಾರಿಸಿದ ವಸ್ತು. ಇದು ಸಿಹಿಯಾದ ರುಚಿಯನ್ನು ಹೊಂದಿದೆ; ಕಟ್ಟೆ=ಪಾತಿ/ಮಡಿ/ಹಾಕಿದ ಬೀಜ ಇಲ್ಲವೇ ನೆಟ್ಟ ಗಿಡದ ಸುತ್ತಲೂ ಕಟ್ಟುವ ಒಡ್ಡು; ಕಟ್ಟಿ=ನಿರ್ಮಿಸಿ/ರಚಿಸಿ;

ಆಕಳು=ಹಸು/ಗೋವು/ದನ; ಹಾಲನ್+ಎರೆದು; ಆಕಳ ಹಾಲು=ಹಸುವಿನ ಹಾಲು; ಎರೆ=ಸುರಿ/ಹೊಯ್ಯು; ಎರೆದು=ಸುರಿದು/ಹಾಕಿ;

ಜೇನುತುಪ್ಪ=ಜೇನು ಹುಳುಗಳು ನೂರಾರು ಬಗೆಯ ಹೂಗಳ ಮಕರಂದವನ್ನು ಹೀರಿ ತಂದು ತಯಾರಿಸಿರುವ ಸಿಹಿಯಾದ ರುಚಿಯನ್ನುಳ್ಳ ತುಪ್ಪ; ಹೊಯ್=ಸುರಿ/ಸೂಸು/ಹಾಕು; ಹೊಯ್ದಡೆ=ಹಾಕಿದರೆ/ಸುರಿದರೆ;

ಸಿಹಿ+ಆಗಬಲ್ಲುದೆ; ಸಿಹಿ=ಒಂದು ಬಗೆಯ ರಸದ ಹೆಸರು. ಮಾನವರು ತಿನ್ನುವ, ಕುಡಿಯುವ ಮತ್ತು ಉಣ್ಣುವ ವಸ್ತುಗಳಲ್ಲಿ ಉಪ್ಪು/ಕಾರ/ಸಿಹಿ/ಕಹಿ/ಹುಳಿ/ಒಗರು ಎಂಬ ಆರು ಬಗೆಯ ರಸಗಳನ್ನು ಹೆಸರಿಸುತ್ತಾರೆ; ಆಗಬಲ್ಲುದೆ=ಆಗುತ್ತದೆಯೇ; ಕಹಿ+ಅಹುದು+ಅಲ್ಲದೆ; ಅಹುದು=ಆಗುವುದು; ಅಲ್ಲದೆ=ಹೊರತು ಪಡಿಸಿ;

ಸಿಹಿಯಾಗಬಲ್ಲುದೆ ಕಹಿಯಹುದಲ್ಲದೆ=ಕಹಿಯಾಗುವುದೇ ಹೊರತು ಸಿಹಿಯಾಗುವುದಿಲ್ಲ;

ಕಲ್ಪನೆಯನ್ನು ಮಾಡಿಕೊಂಡಿರುವ ಪ್ರಸಂಗವೊಂದನ್ನು ರೂಪಕವಾಗಿ ಚಿತ್ರಿಸಲಾಗಿದೆ. "ಬಿತ್ತಿದಂತೆ ಬೆಳೆ" ಎಂಬ ನಾಣ್ಣುಡಿಯೊಂದು ಜನಸಮುದಾಯದಲ್ಲಿ ಬಳಕೆಯಲ್ಲಿದೆ. ಅಂತೆಯೇ ಬೇವಿನ ಬೀಜವನ್ನು ಬಿತ್ತಿ, ಅದಕ್ಕೆ ಯಾವುದೇ ಬಗೆಯ ಆರಯಿಕೆಯನ್ನು ಮಾಡಿದರೂ, ಅದರಿಂದ ಹೊರಹೊಮ್ಮುವ ಬೇವಿನ ಹಣ್ಣು ಕಹಿಯೇ ಆಗಿರುತ್ತದೆ.

ವ್ಯಕ್ತಿಯು ಯಾವುದೇ ಕೆಲಸವನ್ನು ಮಾಡುವಾಗ ಮನದಲ್ಲಿ ಒಳ್ಳೆಯ ಉದ್ದೇಶವನ್ನು ಹೊಂದಿ, ಅದನ್ನು ಒಳ್ಳೆಯ ರೀತಿಯಲ್ಲಿ ಮಾಡಿದಾಗ, ಒಳ್ಳೆಯದು ದೊರಕುತ್ತದೆ. ಒಳ್ಳೆಯ ಉದ್ದೇಶ ಎಂದರೆ ತಾನು ಮಾಡುವ ಕೆಲಸ ತನ್ನನ್ನು ಒಳಗೊಂಡಂತೆ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವಂತಿರಬೇಕು.

ವ್ಯಕ್ತಿಯು ಮನದಲ್ಲಿ ಕೆಟ್ಟ ಉದ್ದೇಶವನ್ನು ಹೊಂದಿ ಹೊರನೋಟಕ್ಕೆ ಅಂದಚೆಂದದ ಮಾತುಗಳನ್ನಾಡುತ್ತಾ ಮಾಡುವ ಕೆಲಸವು ನೋಡುವುದಕ್ಕೆ ಕೇಳುವುದಕ್ಕೆ ಸುಂದರವಾಗಿದ್ದರೂ, ಅದರಿಂದ ಸಹಮಾನವರಿಗೆ ಮತ್ತು ಸಮಾಜಕ್ಕೆ ಕೇಡು ಉಂಟಾಗುತ್ತದೆ ಎಂಬುದನ್ನು ಈ ರೂಪಕ ಸೂಚಿಸುತ್ತದೆ.



೨೭) ಮನ್ನಣೆ ತಪ್ಪಿದ ಬಳಿಕ
ಅಲ್ಲಿರಬಹುದೆ

ಸಲಿಗೆ ತಪ್ಪಿದ ಬಳಿಕ
ಸಲುವುದೆ ಮಾತು. (೧೩೦೩-೧೧೯)

ಮನ್ನಣೆ=ಒಲವು ನಲಿವಿನಿಂದ ಕೂಡಿದ ಮರ‍್ಯಾದೆ/ಆದರ/ಮಾನ್ಯತೆ/ಹಿರಿಮೆ/ಆದ್ಯತೆ; ತಪ್ಪು=ಇಲ್ಲವಾಗು/ಸಿಕ್ಕದಿರು/ದೊರೆಯದಿರು; ತಪ್ಪಿದ=ಇಲ್ಲವಾದ; ಬಳಿಕ=ನಂತರ/ತರುವಾಯ/ಆ ಮೇಲೆ; ಅಲ್ಲಿ+ಇರಬಹುದೆ; ಅಲ್ಲಿ=ಅಂತಹ ಕಡೆ/ಜಾಗ/ನೆಲೆ; ಇರಬಹುದೆ=ಇರಲು ಆಗುತ್ತದೆಯೇ;

ಮನ್ನಣೆ ತಪ್ಪಿದ ಬಳಿಕ ಅಲ್ಲಿರಬಹುದೆ=ಇತರರೊಡನೆ ಹೊಂದಿದ್ದ ಒಲವು ನಲಿವಿನಿಂದ ಕೂಡಿದ ಆತ್ಮೀಯವಾದ ನಂಟು ಮುರಿದುಬಿದ್ದ ನಂತರ, ಅಂತಹ ನೆಲೆಯಲ್ಲಿ ನೆಮ್ಮದಿಯಿಂದ ಬಾಳಲು ಆಗುತ್ತದೆಯೇ;

ಸಲಿಗೆ=ಗೆಳೆತನ/ಸ್ನೇಹ/ಸದರ/ಅತಿಯಾದ ಒಡನಾಟ; ಸಲ್=ಸರಿಹೊಂದು/ಯುಕ್ತವಾಗು/ತಕ್ಕುದಾಗಿರು; ಸಲುವುದೆ=ಸರಿಹೊಂದುವುದೇ/ಸೂಕ್ತವೆನಿಸುವುದೇ; ಮಾತು=ನುಡಿ/ಸೊಲ್ಲು;

ಸಲಿಗೆ ತಪ್ಪಿದ ಬಳಿಕ ಸಲುವುದೆ ಮಾತು=ಇಬ್ಬರು ವ್ಯಕ್ತಿಗಳ ನಡುವಣ ನಂಟು ಕಡಿದುಹೋದ ಮೇಲೆ ಮತ್ತೆ ಮೊದಲಿನಂತೆ ಸರಸದ/ವಿನೋದದ/ ನಗೆ ಚಾಟಿಕೆಯ ಮಾತುಕತೆಯನ್ನಾಡಲು ಆಗುತ್ತದೆಯೇ;

ವ್ಯಕ್ತಿಗಳ ನಡುವಣ ಒಲವಿನ ನಂಟಿನಲ್ಲಿ ಬಿರುಕು ಉಂಟಾದಾಗ ವ್ಯಕ್ತಿಗಳು ಮೊದಲಿನಂತೆ ವ್ಯವಹರಿಸಲು ಆಗುವುದಿಲ್ಲವೆಂಬ ಸಾಮಾಜಿಕ ವಾಸ್ತವವನ್ನು ಈ ನುಡಿಗಳು ಸೂಚಿಸುತ್ತಿವೆ.



೨೮) ಮಾತಿನಲ್ಲಿ ದಿಟ
ಮನದಲ್ಲಿ ಸಟೆ
ಬೇಡವಯ್ಯಾ

ಮನ ವಚನ ಕಾಯ
ಒಂದಾಗದಿದ್ದರೆ
ಕೂಡಲಸಂಗಯ್ಯನೆಂತೊಲಿವನಯ್ಯಾ. (೧೩೭೪-೧೨೭)

ಮಾತಿನ+ಅಲ್ಲಿ; ಮಾತು=ನುಡಿ/ಸೊಲ್ಲು; ದಿಟ=ನಿಜ/ಸತ್ಯ/ವಾಸ್ತವ; ಮನದ+ಅಲ್ಲಿ; ಮನ=ಮನಸ್ಸು/ಚಿತ್ತ; ಸಟೆ=ಸುಳ್ಳು/ಹುಸಿ/ಇರುವುದನ್ನು ಇಲ್ಲವೆಂದು, ಇಲ್ಲದ್ದನ್ನು ಇದೆಯೆಂದು ಹೇಳುವುದು; ಬೇಡ+ಅಯ್ಯಾ; ಬೇಡ=ಸಲ್ಲದು/ಕೂಡದು/ಬೇಕಾಗಿಲ್ಲ;

ಮಾತಿನಲ್ಲಿ ದಿಟ ಮನದಲ್ಲಿ ಸಟೆ=ವ್ಯಕ್ತಿಯು ಬಹಿರಂಗದಲ್ಲಿ ಇತರರ ಮುಂದೆ ಆಡುತ್ತಿರುವ ಮಾತುಗಳಲ್ಲಿ ಸತ್ಯ/ನೀತಿ/ನ್ಯಾಯದ ಸಂಗತಿಗಳು ಕೂಡಿರುತ್ತವೆ. ಆದರೆ ಅದೇ ಸಮಯದಲ್ಲಿ ಆತನ ಅಂತರಂಗದ ಮನದಲ್ಲಿ ಜನಸಮುದಾಯಕ್ಕೆ ಕೇಡನ್ನು ಬಗೆಯುವ ಆಲೋಚನೆಗಳೇ ತುಂಬಿರುತ್ತವೆ; ಬೇಡ+ಅಯ್ಯಾ; ಬೇಡವಯ್ಯಾ= ಹೊರಗೊಂದು ಒಳಗೊಂದು ಬಗೆಯ ವರ್ತನೆಯು ಸರಿಯಲ್ಲ/ಯೋಗ್ಯವಲ್ಲ;

ವಚನ=ಮಾತು/ನುಡಿ/ಸೊಲ್ಲು; ಕಾಯ=ದೇಹ/ಶರೀರ/ಮಯ್; ಒಂದು+ ಆಗದೆ+ಇದ್ದರೆ; ಒಂದಾಗು=ಜತೆಗೂಡು/ಒಂದಾಗಿ ಸೇರು; ಒಂದಾಗದಿದ್ದರೆ= ಜತೆಗೂಡದಿದ್ದರೆ/ಬೇರೆ ಬೇರೆಯಾದರೆ;

ಮನ ವಚನ ಕಾಯ ಒಂದಾಗುವುದು=ವ್ಯಕ್ತಿಯು ತನ್ನ ಮನಸ್ಸಿನಲ್ಲಿ ಮಾಡುವ ಆಲೋಚನೆ, ಬಹಿರಂಗದಲ್ಲಿ ಇತರರೊಡನೆ ಆಡುವ ಮಾತು, ದಿನನಿತ್ಯದ ಜೀವನದಲ್ಲಿ ಮಾಡುವ ಕೆಲಸ–ಇವು ಮೂರು ಒಂದೇ ಆಗಿರುವುದು. ಅಂದರೆ ವ್ಯಕ್ತಿಯ ಚಿಂತನೆ, ಮಾತು ಮತ್ತು ಕೆಲಸಗಳು ಒಳಿತಿನ ಸಂಗತಿಗಳಿಂದ ಜತೆಗೂಡಿರಬೇಕು;

ಕೂಡಲಸಂಗಯ್ಯನ್+ಎಂತು+ಒಲಿವನ್+ಅಯ್ಯಾ; ಕೂಡಲಸಂಗಯ್ಯ=ಬಸವಣ್ಣನ ಮೆಚ್ಚಿನ ದೇವರು; ಎಂತು=ಹೇಗೆ ತಾನೆ/ಯಾವ ರೀತಿ; ಒಲಿ=ಮೆಚ್ಚು/ಒಪ್ಪು /ಪ್ರೀತಿಸು; ಒಲಿವನ್=ಒಲಿಯುವನು/ಮೆಚ್ಚುವನು; ಎಂತೊಲಿವನಯ್ಯಾ=ಹೇಗೆ ತಾನೆ ಒಲಿಯುತ್ತಾನೆ;

ಒಳ್ಳೆಯ ನಡೆನುಡಿಗಳೇ ಶಿವನೆಂದು ಮತ್ತು ಅವನ್ನು ದಿನನಿತ್ಯದ ಬದುಕಿನಲ್ಲಿ ಆಚರಿಸುವುದೇ ಶಿವನ ಪೂಜೆಯೆಂದು ಶಿವಶರಣಶರಣೆಯರು ನಂಬಿದ್ದರು. ಆದ್ದರಿಂದಲೇ ಒಳ್ಳೆಯ ಮನಸ್ಸು, ಒಳ್ಳೆಯ ಮಾತು, ಒಳ್ಳೆಯ ಕೆಲಸವನ್ನು ಮಾಡದ ವ್ಯಕ್ತಿಯನ್ನು ಕೂಡಲಸಂಗಯ್ಯನು ಒಲಿಯುವುದಿಲ್ಲ/ಒಪ್ಪಿಕೊಳ್ಳುವುದಿಲ್ಲವೆಂದು ವಚನಕಾರನು ಹೇಳಿದ್ದಾನೆ.



೨೯) ಮೃದುವಚನವೆ
ಸಕಲ ಜಪಂಗಳಯ್ಯಾ

ಮೃದುವಚನವೆ
ಸಕಲ ತಪಂಗಳಯ್ಯಾ. (೨೪೪-೨೯)

ಮೃದು=ಮೆತ್ತಗಿರುವ/ಮೆದುವಾದ/ಇಂಪಾದ/ಕೋಮಲವಾದ; ವಚನ=ಮಾತು/ಸೊಲ್ಲು/ನುಡಿ; ಮೃದು ವಚನ=ವ್ಯಕ್ತಿಯು ಆಡುವ ಮಾತು ಅದನ್ನು ಕೇಳುವವನ ಮನಸ್ಸಿನಲ್ಲಿ ಅರಿವು, ಒಲವು, ನಂಬಿಕೆ, ಆನಂದವನ್ನು ಮೂಡಿಸುವಂತಿರಬೇಕು. ಆಡುವ ಮಾತುಗಳು ಯಾವುದೇ ರೀತಿಯಲ್ಲಿಯೂ ಕೇಳುಗನ ಮನಸ್ಸನ್ನು ಗಾಸಿಗೊಳಿಸಿ ಸಂಕಟ/ನೋವು/ಅಪಮಾನದಿಂದ ಮುದುಡಿಕೊಳ್ಳುವಂತೆ ಮಾಡಬಾರದು;

ಸಕಲ=ಎಲ್ಲವನ್ನು ಒಳಗೊಂಡಿರುವುದು/ಸಮಗ್ರವಾದುದು; ಜಪಂಗಳ್+ಅಯ್ಯಾ; ಜಪ=ದೇವರ ಹೆಸರನ್ನು/ದೇವರನ್ನು ಮಹಿಮೆಯನ್ನು ಕೊಂಡಾಡುವ ನುಡಿಗಳನ್ನು ಮತ್ತೆ ಮತ್ತೆ ನಿರಂತರವಾಗಿ ಉಚ್ಚರಿಸುವುದು; ಜಪಂಗಳ್=ಜಪಗಳು;

ತಪಂಗಳ್+ಅಯ್ಯಾ; ತಪ=ದೇವರ ಒಲವನ್ನು ಗಳಿಸಿಕೊಳ್ಳುವುದಕ್ಕಾಗಿ/ದೇವರ ಕರುಣೆಗೆ ಪಾತ್ರರಾಗುವುದಕ್ಕಾಗಿ ದೇವರ ಹೆಸರನ್ನು ಒಂದೇ ಸಮನೆ ಬಾಯಲ್ಲಿ ಉಚ್ಚರಿಸುತ್ತ ಇಲ್ಲವೇ ಮನದಲ್ಲಿ ನೆನಪಿಸಿಕೊಳ್ಳುತ್ತ ಅನ್ನ ಆಹಾರಗಳನ್ನು ತೊರೆದು ದೇಹವನ್ನು ಬಹುಬಗೆಯ ದಂಡನೆಗಳಿಗೆ ಗುರಿಮಾಡುವುದು;

ದಿನನಿತ್ಯದ ಜೀವನದ ವ್ಯವಹಾರಗಳಲ್ಲಿ ಸಹಮಾನವರೊಡನೆ ಜತೆಗೂಡಿ ಬಾಳುವಾಗ ವ್ಯಕ್ತಿಯು ಆಡುವ ನುಡಿಗಳು ಬೇರೆಯವರನ್ನು ಮುದಗೊಳಿಸುವಂತಿರಬೇಕೆ ಹೊರತು ನೋಯಿಸಿ ಗಾಸಿಗೊಳಿಸುವಂತಿರಬಾರದು. ವ್ಯಕ್ತಿಯು ಆಡುವ ಒಳ್ಳೆಯ ಮಾತುಗಳು ಎಲ್ಲಾ ಬಗೆಯ ಜಪತಪಗಳ ಆಚರಣೆಗೆ ಸಮನಾದುದು ಎಂಬ ನಿಲುವನ್ನು ಶಿವಶರಣಶರಣೆಯರು ಹೊಂದಿದ್ದರು.



## ೩೦) ಲೋಕದ ಡಂಬಕರ ಮಾತು ಬೇಡ. (೬೦೮-೫೬)

ಲೋಕ=ಜಗತ್ತು/ಪ್ರಪಂಚ; ಡಂಬಕ=ಮೋಸಗಾರ/ವಂಚಕ/ಕಪಟಿ; ಮಾತು=ನುಡಿ/ಸೊಲ್ಲು;

ಲೋಕದ ಡಂಬಕರ ಮಾತು=ದೇವರು/'ಧರ್ಮ'ದ ಹೆಸರಿನಲ್ಲಿ ನೂರೆಂಟು ಬಗೆಯ ಕಟ್ಟುಕತೆಗಳನ್ನು ಕಟ್ಟಿ, ಜನರನ್ನು ಮಾತಿನಿಂದಲೇ ಮರಳುಮಾಡಿ, ಜನರನ್ನು ವಂಚಿಸುವವರು ಆಡುವ ಮಾತು;

ಬೇಡ=ಬೇಕಾಗಿಲ್ಲ/ಅಗತ್ಯವಿಲ್ಲ/ಸಲ್ಲದು/ಕೂಡದು;

ವಂಚಕರ ಮಾತುಗಳಿಗೆ ಮರುಳಾಗಬಾರದು. ನಿಜ ಜೀವನದಲ್ಲಿ ಕಾರ್ಯರೂಪಕ್ಕೆ ಬಾರದ ಬರಿಮಾತುಗಳನ್ನು ನಂಬಬಾರದು.



೩೧) **ಲೋಕೋಪಚಾರಕ್ಕೆ ಮಜ್ಜನಕ್ಕೆರೆವೆನಯ್ಯಾ**
**ಮನದ ತಾಮಸ ಬಿಡದು**
**ಮನದ ಕಪಟ ಬಿಡದು.** (೨೮೨-೩೨)

ಲೋಕ+ಉಪಚಾರಕ್ಕೆ; ಲೋಕ=ಜಗತ್ತು/ಪ್ರಪಂಚ; ಉಪಚಾರ=ಸೇವೆ/ಆದರಣೆ/ಇತರರಿಗೆ ಅನುಕೂಲವಾಗುವ ಕೆಲಸವನ್ನು ಮಾಡುವುದು; ಮಜ್ಜನಕ್ಕೆ+ಎರೆವೆನ್+ಅಯ್ಯಾ; ಮಜ್ಜನ=ಸ್ನಾನ/ಜಳಕ/ಮಯ್ಯನ್ನು ತೊಳೆಯುವುದು; ಎರೆ=ಸುರಿ/ಹಾಕು/ಹೊಯ್ಯು; ಎರೆವೆನ್=ಹಾಕುತ್ತೇನೆ;

ಮಜ್ಜನಕ್ಕೆರೆವೆನಯ್ಯಾ=ದೇವರ ವಿಗ್ರಹವೆಂದು ನಂಬಿರುವ ಲಿಂಗದ ಮೇಲೆ ನೀರು/ಹಾಲು/ಜೇನುತುಪ್ಪ ಮುಂತಾದ ದ್ರವವನ್ನು ಸುರಿದು, ಲಿಂಗಕ್ಕೆ ಜಳಕವನ್ನು ಮಾಡಿಸುತ್ತೇನೆ;

"ಲೋಕೋಪಚಾರ" ಎಂಬುದು ಒಂದು ನುಡಿಗಟ್ಟಾಗಿ ಬಳಕೆಯಾಗಿದೆ. ದೇವರಿಗೆ ಉಪಚಾರ ಮಾಡುವುದರ ಮೂಲಕ, ಆತನನ್ನು ಒಲಿಸಿಕೊಳ್ಳಲು/ಆತನ ಕರುಣೆಗೆ ಪಾತ್ರರಾಗಲು ಲೋಕದಲ್ಲಿ ಜನರು ದೇವರಿಗೆ ಮಜ್ಜನದ ಸೇವೆಯನ್ನು ಮಾಡುತ್ತಿರುವಂತೆ ನಾನು ಕೂಡ ದಿನನಿತ್ಯ ಲಿಂಗಕ್ಕೆ ಮಜ್ಜನವನ್ನು ಮಾಡುತ್ತಿದ್ದೇನೆ.

ಮನ=ಮನಸ್ಸು/ಚಿತ್ತ; ತಾಮಸ=ಕತ್ತಲೆ. ತಾಮಸ ಎಂಬ ಪದವನ್ನು ಒಂದು ರೂಪಕವಾಗಿ ಬಳಸಿದಾಗ "ಅರಿವು ಇಲ್ಲದಿರುವುದು/ಜಡತನ/ಕೆಟ್ಟದ್ದು" ಎಂಬ ತಿರುಳು ದೊರೆಯುತ್ತದೆ; ಮನದ ತಾಮಸ=ಮನದಲ್ಲಿ ತುಡಿಯುವ ಕೆಟ್ಟ ಒಳಮಿಡಿತಗಳು. ಬಿಡು=ತೊರೆ/ತ್ಯಜಿಸು; ಬಿಡದು=ಬಿಟ್ಟುಹೋಗುವುದಿಲ್ಲ/ಬಿಡುತ್ತಿಲ್ಲ;

ಮನದ ತಾಮಸ ಬಿಡದು=ವ್ಯಕ್ತಿಯ ಮನದೊಳಗೆ ನೂರಾರು ಬಗೆಯ ಕೆಟ್ಟ ಆಲೋಚನೆಗಳು ತುಂಬಿಕೊಂಡಿವೆ. ಅವನ್ನು ಹತ್ತಿಕ್ಕಿಕೊಂಡು ಬಾಳಲು ಆಗುತ್ತಿಲ್ಲ;

ಕಪಟ=ವಂಚನೆ/ಮೋಸ;

ಮನದ ಕಪಟ ಬಿಡದು=ಮನದೊಳಗೆ ಇತರರನ್ನು ವಂಚಿಸಿ, ವ್ಯಕ್ತಿಯು ತಾನು ಹೆಚ್ಚಿನದನ್ನು ಪಡೆಯಬೇಕೆಂಬ ಒಳಮಿಡಿತಗಳು ಮನಸ್ಸಿನಿಂದ ದೂರಸರಿಯುತ್ತಿಲ್ಲ/ಇತರರನ್ನು ವಂಚಿಸುವ ಆಲೋಚನೆಗಳೇ ಮನದಲ್ಲಿ ತುಂಬಿವೆ;

ಕೇವಲ ಆಚರಣೆಗಳಿಂದ ಯಾವುದೇ ಪ್ರಯೋಜನವಿಲ್ಲ. ದೇವರನ್ನು ಪೂಜಿಸುವ ವ್ಯಕ್ತಿಯು ಒಳ್ಳೆಯ ನಡೆನುಡಿಗಳನ್ನು ಹೊಂದಿದವನಾಗಿರಬೇಕು ಎಂಬುದನ್ನು ಈ ನುಡಿಗಳು ಸೂಚಿಸುತ್ತಿವೆ.



೩೨) ವ್ಯಾಧನೊಂದು ಮೊಲವ ತಂದಡೆ
ಸಲುವ ಹಾಗಕ್ಕೆ ಬಿಲಿವರಯ್ಯಾ
ನೆಲನಾಳ್ವನ ಹೆಣನೆಂದಡೆ
ಒಂದಡಕೆಗೆ ಕೊಂಬವರಿಲ್ಲ ನೋಡಯ್ಯಾ. (೧೫೮-೨೩)

ವ್ಯಾಧನ್+ಒಂದು; ವ್ಯಾಧ=ಬೇಡ/ಬೇಟೆಗಾರ; ಮೊಲ=ಒಂದು ಪ್ರಾಣಿ; ತಂದಡೆ=ತಂದರೆ; ವ್ಯಾಧನೊಂದು ಮೊಲವ ತಂದಡೆ=ಬೇಡನು ಮೊಲವೊಂದನ್ನು ಬೇಟೆಯಾಡಿ ಕೊಂದು, ಅದನ್ನು ಮಾರಲೆಂದು ಜನವಸತಿಯಿರುವ ಕಡೆಗೆ ಬಂದು ಕೂಗಿದಾಗ; ಸಲ್=ತಕ್ಕುದಾಗಿರು/ಸರಿಹೊಂದು/ಯುಕ್ತವಾಗಿರು/ಯೋಗ್ಯವಾಗು;

ಸಲುವ=ಒಪ್ಪುವ/ತಕ್ಕುದಾದ/ಯೋಗ್ಯವಾದ; ಹಾಗ=ಒಂದು ನಾಣ್ಯ/ಹನ್ನೆರಡನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ಒಂದು ನಾಣ್ಯದ ಹೆಸರು; ಬಿಲಿವರ್+ಅಯ್ಯಾ; ಬಿಲಿ=ಕೊಂಡುಕೊಳ್ಳುವುದು/ಬೆಲೆಕೊಟ್ಟು ಪಡೆಯುವುದು/ಕ್ರಯಕ್ಕೆ ತೆಗೆದುಕೊಳ್ಳುವುದು;

ಸಲುವ ಹಾಗಕ್ಕೆ ಬಿಲಿವರಯ್ಯಾ=ಮೊಲಕ್ಕೆ ತಗುಲುವ ಬೆಲೆಯನ್ನು ಕಟ್ಟಿ, ನಾಣ್ಯವನ್ನು ನೀಡಿ ಕೊಂಡುಕೊಳ್ಳುತ್ತಾರೆ;

ನೆಲನ್+ಆಳ್ವನ; ನೆಲ='ಭೂಮಿ'/ನಾಡು/ರಾಜ್ಯ; ಆಳ್=ಆಡಳಿತವನ್ನು ಮಾಡು; ನೆಲನಾಳ್ವನ್=ರಾಜ/ದೊರೆ; ಹೆಣನ್+ಎಂದಡೆ; ಹೆಣ=ಜೀವವಿಲ್ಲದ ದೇಹ/ಶರೀರ; ಎಂದಡೆ=ಎಂದು ಹೇಳಿದರೆ/ಎಂದು ಕೂಗಿದರೆ; ನೆಲನಾಳ್ವನ ಹೆಣನೆಂದಡೆ= ಜನವಸತಿಯಿರುವ ಕಡೆಗೆ ಬಂದು ರಾಜ/ದೊರೆಯ ಹೆಣವನ್ನು ಮಾರಾಟಕ್ಕಿಟ್ಟು ಕೂಗಿ ಕರೆದರೆ;

ಒಂದು+ಅಡಕೆಗೆ; ಅಡಕೆ=ಒಂದು ಬಗೆಯ ಕಾಯಿ; ಕೊಂಬವರ್+ಇಲ್ಲ;

ಕೊಳ್=ತೆಗೆದುಕೊ/ಕ್ರಯಕ್ಕೆ ಪಡೆ/ಸ್ವೀಕರಿಸು; ಕೊಂಬವರ್=ಕೊಂಡುಕೊಳ್ಳುವವರು/ ಹಣ ಕೊಟ್ಟು ಪಡೆಯುವವರು; ಇಲ್ಲ=ಯಾರೊಬ್ಬರು ಮುಂದೆ ಬಾರರು;

ಅಡಕೆಗೆ ಕೊಂಬವರ್=ಒಂದು ವಸ್ತುವಿಗೆ ಪ್ರತಿಯಾಗಿ ಮತ್ತೊಂದು ವಸ್ತುವನ್ನು ಕೊಟ್ಟು, ಪರಸ್ಪರ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದ ರೀತಿಯು ಸಮಾಜದಲ್ಲಿ

ಕೆಲವು ಕಾಲ ಚಾಲ್ತಿಯಲ್ಲಿತ್ತು. ತಮ್ಮಲ್ಲಿರುವ ಅಡಕೆಯನ್ನು ಕೊಟ್ಟು ತಮಗೆ ಬೇಕಾದ ವಸ್ತುವನ್ನು ಕೊಂಡುಕೊಳ್ಳುವುದು;

ಸತ್ತಿರುವ ಮೊಲಕ್ಕೆ ಒಂದು ಬೆಲೆಯಿದೆ. ಕಾರಣ ಅದರ ಮಾಂಸವನ್ನು ತಿನ್ನುವವರು ಅದಕ್ಕೆ ಬೆಲೆಕೊಟ್ಟು ಕೊಂಡುಕೊಳ್ಳುತ್ತಾರೆ. ಆದರೆ ಸತ್ತಿರುವ ರಾಜನ ಹೆಣಕ್ಕೆ ಬೆಲೆಯಿಲ್ಲ. ಮಾನವ ಜೀವಿಯು ಬದುಕಿದ್ದಾಗ ಮಾತ್ರ ಬೆಲೆ. ಆದ್ದರಿಂದ ವ್ಯಕ್ತಿಯು ತಾನು ಜೀವಂತವಾಗಿರುವಾಗಲೇ, ತನ್ನ ಬದುಕನ್ನು ಚೆನ್ನಾಗಿ ನಡೆಸುವುದರ ಜತೆಗೆ ಲೋಕಕ್ಕೂ ತನ್ನಿಂದ ಪ್ರಯೋಜನವಾಗುವಂತಹ ನಡೆನುಡಿಯನ್ನು ಹೊಂದಿರಬೇಕೆಂಬ ಸಂಗತಿಯನ್ನು ಈ ಪ್ರಸಂಗವು ಸೂಚಿಸುತ್ತಿದೆ.



೩೩) ಸಕಲ ಜೀವಾತ್ಮರಿಗೆ
ಲೇಸನೆ ಬಯಸುವ

ನಮ್ಮ ಕೂಡಲಸಂಗನ ಶರಣರೇ
ಕುಲಜರು. (೫೯೧-೫೫)

ಸಕಲ=ಎಲ್ಲವನ್ನೂ ಒಳಗೊಂಡಿರುವುದು/ಸಮಗ್ರವಾದುದು; ಜೀವಾತ್ಮ=ವ್ಯಕ್ತಿ; ಲೇಸು=ಒಳ್ಳೆಯದು/ಹಿತಕರವಾದುದು/ಮಂಗಳಕರವಾದುದು; ಲೇಸನೆ=ಒಳ್ಳೆಯದನ್ನೇ/ಹಿತಕರವಾದುದನ್ನೇ; ಬಯಸು=ಕೋರು/ಹಾರಯಿಸು/ಇಚ್ಚಿಸು/ಹಂಬಲಿಸು;

ಸಕಲ ಜೀವಾತ್ಮರಿಗೆ ಲೇಸನೆ ಬಯಸುವವರು=ಜನಸಮುದಾಯದಲ್ಲಿರುವ ಎಲ್ಲಾ ವ್ಯಕ್ತಿಗಳಿಗೂ ಒಳ್ಳೆಯದನ್ನೇ ಬಯಸುವವರು. ಅಂದರೆ ವರ್ಣ/ಜಾತಿಗಳ ಹೆಸರಿನಲ್ಲಿ ಜನಸಮುದಾಯವನ್ನು ಮೇಲು/ಕೀಳು ಎಂದು ವಿಂಗಡಿಸದೆ, ಎಲ್ಲರನ್ನು ಸಮಾನವಾಗಿ ಕಾಣುತ್ತ, ಎಲ್ಲರಿಗೂ ಅನ್ನ, ಬಟ್ಟೆ, ವಸತಿ, ವಿದ್ಯೆ, ಕೆಲಸ, ಆರೋಗ್ಯ ದೊರೆತು ಎಲ್ಲರೂ ಜತೆಗೂಡಿ ನೆಮ್ಮದಿಯಿಂದ ಬಾಳುವಂತಾಗಬೇಕು ಎಂಬ ನಿಲುವನ್ನು ಉಳ್ಳವರು; ಕೂಡಲಸಂಗ=ಬಸವಣ್ಣನ ಮೆಚ್ಚಿನ ದೇವರು;

ಶರಣ=ಒಳ್ಳೆಯ ನಡೆನುಡಿಗಳಿಂದ ತನ್ನ ಬದುಕನ್ನು ರೂಪಿಸಿಕೊಂಡು, ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡುವವನು/ಶಿವನನ್ನು ಪೂಜಿಸುವವನು; ಕುಲ=ಜಾತಿ/ಮತ/ವಂಶ/ಮನೆತನ; ಕುಲಜ=ಕುಲದಲ್ಲಿ ಹುಟ್ಟಿದವರು/ಮಾನವ ಸಮುದಾಯಕ್ಕೆ ಸೇರಿದವರು;

ನಮ್ಮ ಕೂಡಲಸಂಗನ ಶರಣರೆ ಕುಲಜರು=ಕುಲದ ಹೆಸರಿನಲ್ಲಿ ಮೇಲು/ಕೀಳು ಎಂಬ ತಾರತಮ್ಯದಿಂದ ರಚನೆಗೊಂಡಿದ್ದ ಸಮಾಜದ ಕಟ್ಟಲೆಯನ್ನು ನಿರಾಕರಿಸಿ, ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿಗಳೆಲ್ಲರೂ 'ಕೂಡಲಸಂಗನ ಶರಣರು' ಎಂಬ ಒಂದೇ ಕುಲಕ್ಕೆ ಸೇರಿದವರು ಎಂಬ ಶಿವಶರಣಶರಣೆಯರ ನಿಲುವನ್ನು ಈ ನುಡಿಗಳು ಸೂಚಿಸುತ್ತಿವೆ.



## ೩೪) ಸತ್ಯವಿಲ್ಲದವಂಗೆ ನಿತ್ಯನೇಮವೇಕೆ. (೬೩೧-೫೯)

ಸತ್ಯ+ಇಲ್ಲದ+ಅವಂಗೆ; ಸತ್ಯ=ನಿಜ/ದಿಟ/ವಾಸ್ತವ; ಇಲ್ಲದ=ಇಲ್ಲದಿರುವ; ಅವಂಗೆ=ಅವನಿಗೆ;

ಸತ್ಯವಿಲ್ಲದವಂಗೆ=ತನ್ನ ದಿನನಿತ್ಯದ ವ್ಯವಹಾರಗಳಲ್ಲಿ ಸತ್ಯದ ನಡೆನುಡಿಯಿಂದ ಬಾಳದವನಿಗೆ; ಸತ್ಯದ ನಡೆನುಡಿ ಎಂದರೆ ವ್ಯಕ್ತಿಯು ಆಡುವ ಮಾತು ಮತ್ತು ಮಾಡುವ ಕೆಲಸಗಳು ತನ್ನ ಹಿತವನ್ನು ಕಾಯುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡಬೇಕು;

ನಿತ್ಯ=ಪ್ರತಿದಿನವೂ; ನೇಮ+ಏಕೆ; ನೇಮ=ದೇವರನ್ನು ಒಲಿಸಿಕೊಳ್ಳಲು/ದೇವರ ಕರುಣೆಗೆ ಪಾತ್ರರಾಗಲು ಮಾಡುವ ಜಪ/ತಪ/ಪೂಜೆ/ಉಪವಾಸ/ಜಾಗರಣೆ ಮುಂತಾದ ಆಚರಣೆ. ಈ ಆಚರಣೆಯಲ್ಲಿ ತೊಡಗಿದಾಗ ವ್ಯಕ್ತಿಯು ಹೀಗೆಯೆ ಇರಬೇಕು/ಮಾಡಬೇಕು/ನಡೆದುಕೊಳ್ಳಬೇಕು ಎಂಬ ನಿಯಮವಿರುತ್ತದೆ/ವ್ರತ/ನೋಂಪಿ/ ಏಕೆ=ಯಾವುದಕ್ಕೆ ಬೇಕು/ಪ್ರಯೋಜನವೇನು;

ಸಹಮಾನವರಿಗೆ ಮತ್ತು ಸಮಾಜಕ್ಕೆ ಒಳಿತನ್ನು ಮಾಡದ ವ್ಯಕ್ತಿಯು ಮಾಡುವ ಯಾವುದೇ ಬಗೆಯ ದೇವರ ಪೂಜೆಯಿಂದ ಇಲ್ಲವೇ ಆಚರಣೆಯಿಂದ ಏನೊಂದು ಪ್ರಯೋಜನವಿಲ್ಲ.



೩೫) ಸಾರ ಸಜ್ಜನರ ಸಂಗ ಲೇಸು ಕಂಡಯ್ಯಾ
ದೂರ ದುರ್ಜನರ ಸಂಗವದು ಭಂಗವಯ್ಯಾ. (೧೩೪-೨೧)

ಸಾರ=ಒಳ್ಳೆಯದು/ಉತ್ತಮವಾದುದು/ಮೇಲಾದುದು;

ಸಜ್ಜನ=ಒಳ್ಳೆಯ ನಡೆನುಡಿಯುಳ್ಳ ವ್ಯಕ್ತಿ; ಸಂಗ=ಗೆಳೆತನ/ಒಡನಾಟ/ಸಹವಾಸ/ಸ್ನೇಹ; ಲೇಸು=ಒಳ್ಳೆಯದು/ಹಿತಕರವಾದುದು/ಮಂಗಳಕರವಾದುದು; ಕಂಡ+ಅಯ್ಯಾ; ಕಾಣು=ನೋಡು/ತಿಳಿ/ಅರಿ;

ಸಜ್ಜನರ ಸಂಗ ಲೇಸು ಕಂಡಯ್ಯಾ=ಒಳ್ಳೆಯ ನಡೆನುಡಿಯುಳ್ಳವರ ಜತೆಗಿನ ಗೆಳೆತನ/ಒಡನಾಟ/ವ್ಯವಹಾರ ವ್ಯಕ್ತಿಗೆ ಜೀವನದಲ್ಲಿ ಒಳಿತನ ದಾರಿಯಲ್ಲಿ ಸಾಗುವಂತೆ ಮಾಡಿ, ಒಲವು ನಲಿವು ಆನಂದವನ್ನು ನೀಡುತ್ತದೆ. ಆದ್ದರಿಂದ ಒಳ್ಳೆಯ ನಡೆನುಡಿಯುಳ್ಳವರ ಹತ್ತಿರವಿರಬೇಕು.

ದೂರ=ಎರವಾದುದು/ಹಾನಿಯನ್ನುಂಟು ಮಾಡುವುದು/ಕೆಟ್ಟದ್ದು;

ದುರ್ಜನ=ಕೆಟ್ಟ ನಡೆನುಡಿಯುಳ್ಳ ವ್ಯಕ್ತಿ; ಸಂಗ+ಅದು; ಅದು=ಆ ರೀತಿಯ ನಂಟು/ಅಂತಹ ಒಡನಾಟ/ಗೆಳೆತನ; ಭಂಗ+ಅಯ್ಯಾ; ಭಂಗ=ಅಪಮಾನ/ಸೋಲು/ನಾಶ/ಹಾನಿ;

ದುರ್ಜನರ ಸಂಗವದು ಭಂಗವಯ್ಯಾ=ಕೆಟ್ಟ ನಡೆನುಡಿಯುಳ್ಳವರ ಗೆಳೆತನ/ಒಡನಾಟ/ವ್ಯವಹಾರವು ವ್ಯಕ್ತಿಗೆ ಎಂದಿದ್ದರೂ ಹಾನಿ/ಕೇಡು/ಸಾವು/ನೋವನ್ನು ತರುತ್ತದೆ ಮತ್ತು ಸಮಾಜದಲ್ಲಿ ನಾಲ್ಕು ಮಂದಿಯ ಮುಂದೆ ಅಪಮಾನದಿಂದ ತಲೆತಗ್ಗಿಸುವಂತೆ ಮಾಡುತ್ತದೆ. ಆದ್ದರಿಂದ ಕೆಟ್ಟ ನಡೆನುಡಿಯುಳ್ಳವರಿಂದ ದೂರವಿರಬೇಕು.



## ೩೬) ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನರಸುವರೆ ಅಯ್ಯಾ (೧೨೭-೨೦)

ಸ್ನೇಹ=ಗೆಳೆತನ/ವ್ಯಕ್ತಿಗಳ ನಡುವೆ ಪರಸ್ಪರ ಒಳಿತನ್ನು ಬಯಸುವ ಮತ್ತು ಒಳಿತನ್ನು ಮಾಡುವ ಒಳಮಿಡಿತಗಳನ್ನು ಮನಸ್ಸಿನಲ್ಲಿ ಹೊಂದಿರುವುದು;

ತಪ್ಪು=ಹಾಳಾಗು/ಕಳೆದುಹೋಗು/ಕೆಡು; ಠಾವಿನ+ಅಲ್ಲಿ; ಠಾವು=ಜಾಗ/ನೆಲೆ/ಎಡೆ/ತಾಣ;

ಗುಣ+ಅನ್+ಅರಸುವರೆ; ಗುಣ=ನಡತೆ/ವಿವೇಕ/ಸಜ್ಜನಿಕೆ/ಒಳ್ಳೆಯತನ; ಅನ್=ಅನ್ನು; ಅರಸು=ಹುಡುಕು; ಅರಸುವರೆ=ಹುಡುಕುತ್ತಾರೆಯೆ/ಕಾಣಲು ಪ್ರಯತ್ನಿಸುತ್ತಾರೆಯೆ;

ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನರಸುವರೆ ಅಯ್ಯಾ=ಇಬ್ಬರು ವ್ಯಕ್ತಿಗಳ ಮನಸ್ಸನ್ನು ಒಲವು ನಲಿವು ನಂಬಿಕೆಯಿಂದ ಪರಸ್ಪರ ಬೆಸೆದಿದ್ದ ಗೆಳೆತನವು ಮುರಿದು ಬಿದ್ದಾಗ, ಅವರ ನಡುವಣ ಒಡನಾಟದಲ್ಲಿ ಒಳ್ಳೆಯ ನಡೆನುಡಿಗಳನ್ನು ಮತ್ತೆ ಕಾಣಲು ಆಗುವುದಿಲ್ಲ. ಏಕೆಂದರೆ ಇಬ್ಬರಲ್ಲಿ ಯಾರಾದರೊಬ್ಬರು ಒಲವಿನ ಮತ್ತು ನಂಬಿಕೆಯ ನಡೆನುಡಿಗಳಿಗೆ ದ್ರೋಹವನ್ನು ಬಗೆದಿರುತ್ತಾರೆ;



೩೭) ಹರಿವ ಹಾವಿಂಗಂಜೆ
ಉರಿಯ ನಾಲಗೆಗಂಜೆ
ಸುರಗಿಯ ಮೊನೆಗಂಜೆ

ಒಂದಕ್ಕಂಜುವೆ ಒಂದಕ್ಕಳುಕುವೆ
ಪರಸ್ತ್ರೀ ಪರಧನವೆಂಬೀ
ಜೂಬಿಂಗಂಜುವೆ. (೪೪೭-೪೩)

ಹರಿ=ಕಚ್ಚು/ಕಡಿ; ಹಾವಿಂಗೆ+ಅಂಜೆ; ಹಾವಿಂಗೆ=ಹಾವಿಗೆ; ಅಂಜು=ಹೆದರು/ಪುಕ್ಕಲುಗೊಳ್ಳು; ಅಂಜೆ=ಹೆದರುವುದಿಲ್ಲ; ಹರಿವ ಹಾವಿಂಗಂಜೆ=ಕಚ್ಚಿದಾಗ ನಂಜನ್ನು ಕಾರುವ ಹಾವಿಗೆ ಹೆದರುವುದಿಲ್ಲ;

ಉರಿ=ಬೆಂಕಿ/ಬೆಂಕಿಯ ಜ್ವಾಲೆ; ನಾಲಿಗೆಗೆ+ಅಂಜೆ; ಉರಿಯ ನಾಲಗೆ=ಬೆಂಕಿಯು ದಗದಗನೆ ಹತ್ತಿ ಉರಿಯುತ್ತಿರುವಾಗ ಸುತ್ತಮುತ್ತ ಹಬ್ಬುವ ಜ್ವಾಲೆ;

ಉರಿಯ ನಾಲಿಗೆಗಂಜೆ=ಸುಟ್ಟುಬೂದಿ ಮಾಡುವ ಬೆಂಕಿಗೆ ಹೆದರುವುದಿಲ್ಲ;

ಸುರಗಿ=ಚೂರಿ/ಸಣ್ಣ ಕತ್ತಿ/ಒಂದು ಬಗೆಯ ಹತಾರ; ಮೊನೆಗೆ+ಅಂಜೆ; ಮೊನೆ=ಚೂಪಾದ ತುದಿ/ಹರಿತವಾದ ಕೊನೆ;

ಸುರಗಿಯ ಮೊನೆಗಂಜೆ=ತಿವಿದಾಗ ಗಳಿಗೆ ಮಾತ್ರದಲ್ಲಿ ಸಾವಿಗೆ ದೂಡುವ ಚೂರಿಯ ಮೊನೆಗೆ ಅಂಜುವುದಿಲ್ಲ;

ಒಂದಕ್ಕೆ+ಅಂಜುವೆ; ಅಂಜುವೆ=ಹೆದರುತ್ತೇನೆ/ಪುಕ್ಕಲುಗೊಳ್ಳುತ್ತೇನೆ/ಹಿಂಜರಿಯುತ್ತೇನೆ; ಒಂದಕ್ಕಂಜುವೆ=ಒಂದು ಕೆಲಸವನ್ನು ಮಾಡಲು ಹೆದರುತ್ತೇನೆ; ಒಂದಕ್ಕೆ+ಅಳುಕುವೆ; ಅಳುಕು=ಹೆದರು/ನಡುಗು/ತತ್ತರಿಸು; ಅಳುಕುವೆ=ಹೆದರಿಕೆಯಿಂದ ತತ್ತರಿಸುತ್ತ ನಡುಗುತ್ತೇನೆ;

ಒಂದಕ್ಕಳುಕುವೆ=ಒಂದು ಕೆಲಸವನ್ನು ಮಾಡಲು ನಡುಗುತ್ತೇನೆ;

ಪರ=ಅನ್ಯ/ಬೇರೆಯ; ಸ್ತ್ರೀ=ಹೆಣ್ಣು/ಹೆಂಗಸು/ವನಿತೆ; ಪರಸ್ತ್ರೀ=ಬೇರೆಯವನ ಮಡದಿ/ಹೆಂಡತಿ/ಪತ್ನಿ/ಬೇರೆಯ ಹೆಂಗಸು; ಪರಧನ+ಎಂಬ+ಈ; ಧನ=ಸಂಪತ್ತು/ಆಸ್ತಿಪಾಸ್ತಿ/ಒಡವೆ ವಸ್ತು/ಹಣಕಾಸು; ಪರಧನ=ಬೇರೆಯವರಿಗೆ ಸೇರಿದ ಸಂಪತ್ತು;

ಜೂಬಿಂಗೆ+ಅಂಜುವೆ; ಜೂಬು=ದೆವ್ವ/ಪಿಶಾಚಿ/ವಯಸ್ಸು ತುಂಬುವುದಕ್ಕೆ ಮುಂಚೆ ರೋಗರುಜಿನಗಳಿಂದ/ಅವಗಡಗಳಿಂದ ಸತ್ತವರು ದೆವ್ವಗಳಾಗುತ್ತಾರೆ ಎಂಬ ಕಲ್ಪನೆಯು ಜನಮನದಲ್ಲಿದೆ; ಜೂಬಿಂಗೆ=ಪಿಶಾಚಿಗೆ/ದೆವ್ವಕ್ಕೆ;

ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ=ಬೇರೆಯವರ ಮಡದಿ ಮತ್ತು ಬೇರೆಯವರ ಸಂಪತ್ತನ್ನು ದೆವ್ವವೆಂದು ಕರೆಯಲಾಗಿದೆ. ದೆವ್ವವನ್ನು ಕೇಡಿಗೆ/ದುರಂತಕ್ಕೆ/ಹಾನಿಗೆ ಒಂದು ರೂಪಕವಾಗಿ ಬಳಸಲಾಗಿದೆ.

ದೆವ್ವ ತಾನು ಮೆಟ್ಟಿಕೊಂಡವರನ್ನು ಬಲಿ ತೆಗೆದುಕೊಳ್ಳುವಂತೆಯೇ ಬೇರೆಯವರ ಮಡದಿ ಮತ್ತು ಸಂಪತ್ತಿಗೆ ಹಂಬಲಿಸಿದವನು, ಸಮಾಜ ಒಪ್ಪಿತವಲ್ಲದ ಕಾಮದ ನಂಟನ್ನು ಪಡೆಯಲು ಹೋಗಿ ಮತ್ತು ಸಂಪತ್ತನ್ನು ಅಪಹರಿಸಲು ಹೋಗಿ ಸಾವು ನೋವುಗಳಿಗೆ ಗುರಿಯಾಗುತ್ತಾನೆ. ಆದ್ದರಿಂದ ಇಂತಹ ನೀಚ ಕೆಲಸಗಳನ್ನು ತಾನು ಮಾಡುವುದಿಲ್ಲವೆಂದು ವ್ಯಕ್ತಿಯು ತೀರ್ಮಾನಿಸಿದ್ದಾನೆ.



೩೮) ಹುತ್ತದ ಮೇಲಣ ರಜ್ಜು ಮುಟ್ಟಿದಡೆ
ಸಾವರು ಶಂಕಿತರಾದವರು

ಸರ್ಪದಷ್ಟವಾದಡೆಯೂ
ಸಾಯರು ನಿಶ್ಶಂಕಿತರಾದವರು. (೭೭೨-೭೦)

ಹುತ್ತ=ಗೆದ್ದಲು/ಗೆಜ್ಜಲು ಹುಳುಗಳು ಕಟ್ಟುವ ಕೊಳವೆಗಳಿಂದ/ಬಿಲಗಳಿಂದ ಕೂಡಿದ ಮಣ್ಣಿನ ಗೂಡು. ಇದನ್ನು ಹಾವು ತನ್ನ ವಾಸದ ನೆಲೆಯನ್ನಾಗಿ ಮಾಡಿಕೊಂಡಿರುತ್ತದೆ; ಮೇಲಣ=ಮೇಲುಗಡೆಯಿರುವ; ರಜ್ಜು=ಹಗ್ಗ/ಹುರಿ/ಮಿಣಿ/ಪಾಶ; ಮುಟ್ಟು=ಸೋಕು/ತಗುಲು; ಮುಟ್ಟಿದಡೆ=ತಗುಲಿದರೆ/ಸೋಕಿದರೆ;

ಸಾವು=ಜೀವ ಹೋಗುವುದು/ಪ್ರಾಣ ಹೋಗುವುದು/ಉಸಿರು ನಿಲ್ಲುವುದು; ಸಾವರು=ಸಾಯುತ್ತಾರೆ; ಶಂಕಿತರ್+ಆದವರು; ಶಂಕೆ=ಅಂಜಿಕೆ/ಹೆದರಿಕೆ/ಹಿಂಜರಿಕೆ/ಅಳುಕು; ಶಂಕಿತ=ಅಂಜಿಕೆಯುಳ್ಳವನು/ಪುಕ್ಕಲುತನದವನು/ಹೆದರಿಕೆಯುಳ್ಳವನು; ಶಂಕಿತರಾದವರು=ಅಂಜಿಕೆಯುಳ್ಳವರು;

ಹುತ್ತದ ಮೇಲಣ ರಜ್ಜು ಮುಟ್ಟಿದಡೆ ಸಾವರು ಶಂಕಿತರಾದವರು=ಎಲ್ಲದಕ್ಕೂ ಹೆದರುವ ಗುಣವುಳ್ಳ ವ್ಯಕ್ತಿಗಳು ಹುತ್ತದ ಮೇಲಿರುವ ಹಗ್ಗವನ್ನೇ ಹಾವೆಂದು ತಿಳಿದು, ಹೆದರಿ ಹೆಪ್ಪಳಿಸಿಹೋಗಿ ಎದೆ ನಡುಗಿ ಸಾವನ್ನಪ್ಪುತ್ತಾರೆ. ಅವರ ಪುಕ್ಕಲುತನವೇ ಅವರ ಪಾಲಿಗೆ ಸಾವನ್ನು ತರುತ್ತದೆ;

ಸರ್ಪ+ದಷ್ಟ+ಆದಡೆಯೂ; ಸರ್ಪ=ಹಾವು/ಉರಗ; ದಷ್ಟ=ಕಚ್ಚುವುದು/ಕಡಿಯುವುದು; ಸರ್ಪದಷ್ಟ=ಹಾವು ಕಡಿಯುವುದು/ಹಾವಿನಿಂದ ಕಚ್ಚಿಸಿಕೊಂಡಿರುವುದು; ಆದಡೆಯೂ=ಆಗಿದ್ದರೂ;

ಸರ್ಪದಷ್ಟವಾದಡೆಯೂ=ಹಾವು ಕಚ್ಚಿದ್ದರೂ/ಹಾವಿನ ಕಡಿತಕ್ಕೆ ಒಳಗಾಗಿದ್ದರೂ;

ಸಾಯರು=ಸಾಯುವುದಿಲ್ಲ; ನಿಶ್ಶಂಕಿತರ್+ಆದವರು;

ನಿಶ್ಶಂಕೆ=ಹೆದರಿಕೆಯಿಲ್ಲದಿರುವುದು/ಅಂಜಿಕೆಯಿಲ್ಲದಿರುವುದು; ಆದವರು=ಆಗಿರುವವರು;

ಸರ್ಪದಷ್ಟವಾದಡೆಯೂ ಸಾಯರು ನಿಶ್ಶಂಕಿತರಾದವರು=ಹಾವು ಕಚ್ಚಿದ್ದರೂ ಹೆದರಿಕೆಯಿಲ್ಲದ ವ್ಯಕ್ತಿಗಳು ಮಾನಸಿಕವಾಗಿ ಕುಗ್ಗದೆ ಸಾವನ್ನು ಎದುರಿಸುತ್ತಾರೆ. ದೇಹದ ಎಲ್ಲೆಡೆಗೂ ನಂಜು ಹರಡದಂತೆ ಮಾಡುವ ಮತ್ತು ನಂಜನ್ನು ಹೊರತೆಗೆಯಲು ಇತರರು ಮಾಡುವ ಆರಯಿಕೆಗೆ ಸಹಕರಿಸುತ್ತಾ, ಸಾವಿನಿಂದ ಪಾರಾಗುತ್ತಾರೆ. ಅವರು ಹೊಂದಿರುವ ಮಾನಸಿಕ ಗಟ್ಟಿತನ ಮತ್ತು ಕೆಚ್ಚೆದೆಯ ಒಳಮಿಡಿತವೇ ಅಂಜಿಕೆಯಿಲ್ಲದ ವ್ಯಕ್ತಿಗಳಿಗೆ ಬದುಕಿ ಉಳಿಯುವ ಕಸುವನ್ನು ನೀಡುತ್ತದೆ.



೩೯)  ಹೂಸಿ ಏನು ಫಲ
ಮನದಲ್ಲಿ ಲೇಸಿಲ್ಲದನ್ನಕ್ಕ

ಒಂದನಾಡಹೋಗಿ
ಒಂಬತ್ತನಾಡುವ
ಡಂಬಕರ ಮೆಚ್ಚ ಕೂಡಲಸಂಗಯ್ಯ. (೧೧೪-೨೦)

ಪೂಸು>ಹೂಸು=ಬಳಿದುಕೊಳ್ಳುವುದು/ಲೇಪಿಸಿಕೊಳ್ಳುವುದು/ತೊಡೆದುಕೊಳ್ಳುವುದು; ಹೂಸಿ='ವಿಭೂತಿ'ಯನ್ನು ಇಲ್ಲವೇ 'ಗಂಧದ' ಕೊರಡನ್ನು ನೀರಿನಿಂದ ತೇಯ್ದಾಗ ಬರುವ ಹಸಿಯನ್ನು ಹಣೆ/ತೋಳು/ಹೊಟ್ಟೆಯ ಮೇಲೆ ಬಳಿದುಕೊಳ್ಳುವುದು; ಏನು=ಯಾವುದು; ಫಲ=ಪ್ರಯೋಜನ/ಪರಿಣಾಮ;

ಮನ=ಮನಸ್ಸು/ಚಿತ್ತ; ಮನದಲ್ಲಿ=ಮನಸ್ಸಿನಲ್ಲಿ/ಮನದೊಳಗೆ; ಲೇಸು+ಇಲ್ಲದ+ಅನ್ನಕ್ಕ; ಲೇಸು=ಒಳ್ಳೆಯದು/ಹಿತಕರವಾದುದು/ಮಂಗಳಕರವಾದುದು; ಅನ್ನಕ್ಕ=ವರೆಗೆ/ತನಕ; ಇಲ್ಲದನ್ನಕ್ಕ=ಇಲ್ಲದಿರುವ ತನಕ;

ಹೂಸಿ ಏನು ಫಲ ಮನದಲ್ಲಿ ಲೇಸಿಲ್ಲದನ್ನಕ್ಕ=ವ್ಯಕ್ತಿಯ ಮನದಲ್ಲಿ ತನಗೆ ಒಳಿತನ್ನು ಬಯಸುವಂತೆಯೇ ಸಹಮಾನವರಿಗೆ ಮತ್ತು ಸಮಾಜಕ್ಕೆ ಹಿತವನ್ನುಂಟುಮಾಡಬೇಕೆಂಬ ಒಳ್ಳೆಯ ಉದ್ದೇಶವಿರಬೇಕು. ಮನದಲ್ಲಿ ಒಳ್ಳೆಯ ಒಳಮಿಡಿತಗಳನ್ನು ಹೊಂದಿರದೆ, ಬಹಿರಂಗದಲ್ಲಿ ಮಯ್ಯ ಮೇಲೆ 'ವಿಭೂತಿ'ಯನ್ನು ಬಳಿದುಕೊಂಡು ಶಿವಶರಣನಂತೆ ತೋರಿಸಿಕೊಳ್ಳುವುದರಿಂದ ಬಂದ ಪ್ರಯೋಜನವೇನು/ಏನನ್ನು ಪಡೆದಂತಾಗುತ್ತದೆ;

ಒಂದನ್+ಆಡ+ಹೋಗಿ; ಆಡು=ಹೇಳು/ನುಡಿ; ಒಂದನಾಡಹೋಗಿ=ಸತ್ಯದ/ದಿಟದ/ವಾಸ್ತವದ ಒಂದು ಸಂಗತಿಯನ್ನು ಹೇಳುವ ಬದಲು/ಹೇಳುವುದನ್ನು ಬಿಟ್ಟು; ಒಂಬತ್ತನ್+ಆಡುವ; ಒಂಬತ್ತು=ವಸ್ತು/ವ್ಯಕ್ತಿಗಳನ್ನು ಸೂಚಿಸುವ ಒಂದು ಸಂಕೆ/ಹತ್ತರಿಂದ ಒಂದನ್ನು ಕಳೆದಾಗ ಬರುವ ಸಂಕೆ; ಒಂಬತ್ತನ್ನು ಆಡುವ=ಇಲ್ಲಸಲ್ಲದ/ಸುಳ್ಳಿನ/ ನಿಜವಲ್ಲದ ಹಲವು ಬಗೆಯ ನುಡಿಗಳನ್ನು ಆಡಲು ತೊಡಗುವ; ಡಂಬ=ಮೋಸ/ವಂಚನೆ/ಕಪಟತನ; ಡಂಬಕ=ಮೋಸಗಾರ/ವಂಚಕ/ಕಪಟಿ;

ಮೆಚ್ಚು=ಒಪ್ಪು/ಸಮ್ಮತಿಸು/ಒಲಿ/ಪ್ರೀತಿಸು; ಮೆಚ್ಚ=ಮೆಚ್ಚುವುದಿಲ್ಲ/ಒಪ್ಪುವುದಿಲ್ಲ; ಕೂಡಲಸಂಗಯ್ಯ=ಬಸವಣ್ಣನ ಮೆಚ್ಚಿನ ದೇವರು;

ಒಂದಾನಾಡ ಹೋಗಿ ಒಂಬತ್ತನಾಡುವ ಡಂಬಕರ ಮೆಚ್ಚ ಕೂಡಲಸಂಗಯ್ಯ=ನಿಜದ ಒಂದು ಸಂಗತಿಯನ್ನು ಹೇಳುವ ಬದಲು ಹಲವು ಬಗೆಯ ಸುಳ್ಳುಗಳನ್ನು ಹೇಳಿ ಜನರನ್ನು ಮರಳು ಮಾಡುವ ವಂಚಕರನ್ನು ದೇವರು ಮೆಚ್ಚುವುದಿಲ್ಲ.

ಶಿವಶರಣನಂತೆ ತೋರಿಸಿಕೊಳ್ಳಲು ತೊಡುವ ಉಡುಗೆ ತೊಡುಗೆಯನ್ನಾಗಲಿ ಇಲ್ಲವೇ ಆಡಂಬರದ ಮಾತುಗಳನ್ನಾಗಲಿ ದೇವರು ಮೆಚ್ಚುವುದಿಲ್ಲ. ದೇವರು ಮೆಚ್ಚುವುದು ವ್ಯಕ್ತಿಯ ಒಳ್ಳೆಯ ನಡೆನುಡಿಗಳನ್ನು ಮಾತ್ರ ಎಂಬ ತಿರುಳನ್ನು ಈ ನುಡಿಗಳು ಸೂಚಿಸುತ್ತಿವೆ.



## ಬರಹಗಾರ

ಹೆಸರು: ಸಿ.ಪಿ.ನಾಗರಾಜ (1945)

ತಾಯಿ: ಲಕ್ಷ್ಮೀದೇವಮ್ಮ, ಮದ್ದೂರು, ಮಂಡ್ಯ ಜಿಲ್ಲೆ.

ತಂದೆ: ಪುಟ್ಟೇಗೌಡ, ಚಿಕ್ಕೆರೆ, ಚೆನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

ಓದು: ಎಂ.ಎ., ಪಿಎಚ್.ಡಿ.,

ಕೆಲಸ: ಕನ್ನಡ ಉಪನ್ಯಾಸಕ

1971–72 ಅರ್ಜುನಪುರಿ ಕಾಲೇಜು, ಮದ್ದೂರು, ಮಂಡ್ಯ ಜಿಲ್ಲೆ.

1972–2003 ಭಾರತಿ ಕಾಲೇಜು, ಕಾಳಮುದ್ದನ ದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

2006–ಸ್ನಾತಕೋತ್ತರ ಕೇಂದ್ರ, ಮಹಾರಾಣಿ ಲಕ್ಷ್ಮೀಅಮ್ಮಣ್ಣಿ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

ಬರಹ:

ನಾಟಕ: (ಏಳು)

ಅಂಬೆ

ಅಂಗಿಬಟ್ಟೆ

ಕಳ್ಳರಿದ್ದಾರೆ ಎಚ್ಚರಿಕೆ

ಭಾಗೀರತಿ

ಹಾವು

ಒಂದು ರೂಪಾಯಿ

ಹೆಣದ ಹಣ.

ಗದ್ಯ: (ಹನ್ನೊಂದು)

ಕರಿಯನ ಪುರಾಣ

ಹಳ್ಳಿಗಾಡಿನ ರೂವಾರಿ

ಆಣೆ ಪ್ರಮಾಣಗಳು

ಸರ್ವಜ್ಞ ವಚನಗಳ ಓದು

ಶಿವಶರಣಶರಣೆಯರ ವಚನಗಳ ಓದು

ಬಸವಣ್ಣ ವಚನಗಳ ಓದು.

ಕನಕನ ಅವ್ವ

ಡಾ. ಬಂದೀಗೌಡ

ಬಯ್ಗುಳ

ಅಲ್ಲಮ ವಚನಗಳ ಓದು

ಶಿವಶರಣರ ವಚನಗಳ ಓದು

ವಿಳಾಸ: ಸಿ.ಪಿ.ನಾಗರಾಜ, 75, 'ಎ' ಬ್ಲಾಕ್, 5ನೆಯ ಕ್ರಾಸ್, ಕ್ರಿಷ್ಣ ಗಾರ್ಡನ್
ಆರ್.ವಿ. ಕಾಲೇಜು ಪೋಸ್ಟ್, ಬೆಂಗಳೂರು–560059.

ಮೊ: 9986347521.

ngy7777@gmail.com





ಹಾವಾಡಿಗನು ಮೂಕೊರತಿಯು
ತನ್ನ ಕೈಯಲ್ಲಿ ಹಾವು
ಮಗನ ಮದುವೆಗೆ
ಶಕುನವ ನೋಡ ಹೋದಾಗ

ಇದಿರಲ್ಲೊಬ್ಬ ಮೂಕೊರತಿಯು ಹಾವಾಡಿಗನ ಕಂಡು
ಶಕುನ ಹೊಲ್ಲೆಂಬ ಚದುರನ ನೋಡಾ

ತನ್ನ ಸತಿ ಮೂಕೊರತಿ
ತನ್ನ ಕೈಯಲ್ಲಿ ಹಾವು
ತಾನು ಮೂಕೊರೆಯ

ತನ್ನ ಭಿನ್ನವನರಿಯದೆ ಅನ್ಯರನೆಂಬ
ಕುನ್ನಿಯನೇನೆಂಬೆ ಕೂಡಲಸಂಗಮದೇವಾ

ನಾಗು ಸ್ಮಾರಕ ಪ್ರಕಾಶನ, ಬೆಂಗಳೂರು.

ರೂ. 120/-